CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೦ | ಬೆಂಗಳೂರು, ಗುರುವಾರ, ಆಗಸ್ಟ್ ೨೫, ೨೦೦೫ (ಭಾದ್ರಪದ ೩, ಶಕ ವರ್ಷ ೧೯೨೭) | ಸಂಚಿಕೆ ೩೪

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರ ನಡವಳಿಗಳು ಬೆಂಗಳೂರು

**ವಿಷಯ :** ಶ್ರೀಮತಿ ಸುರಯ್ಯ ಪರ್ವಿನ್, ದ್ವಿತೀಯ ದರ್ಜೆ ಸಹಾಯಕಿ ಪ್ರಾಥಮಿಕ ಆರೋಗ್ಯ ಕೇಂದ್ರ, ಅತ್ತಿಹಳ್ಳಿ, ಇವರ ಅನಧಿಕೃತ ಗೈರುಹಾಜರಿ ಬಗ್ಗೆ.

**ಓದಲಾಗಿದೆ :**
1) ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ: ಡಿಪಿಎನ್(3)48:01-02, ದಿನಾಂಕ: 27.12.2001.
2) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಡಿಪಿಎನ್(3)ಸಿಆರ್:48:01-02, ದಿನಾಂಕ: 4.2.2003.
3) ವಿಚಾರಣಾ ವರದಿಯ ನಂ:ವಿಆ:ವಿಚಾರಣೆ:ಎನ್‌ಜಿ:241:02-03, ದಿನಾಂಕ: 28.8.2004.
4) ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ: ಡಿಪಿಎನ್(3)ಸಿಆರ್:48:01-02, ದಿನಾಂಕ: 24.9.2004.
5) ಪತ್ರಿಕಾ ಪ್ರಕಟಣೆ ನೀಡಲಾದ ದಿನಾಂಕ: 8.6.2005. (ವಿಜಯ ಕರ್ನಾಟಕ)

**ಪ್ರಸ್ತಾವನೆ:**

ಶ್ರೀಮತಿ ಸುರಯ್ಯ ಪರ್ವಿನ್, ದ್ವಿತೀಯ ದರ್ಜೆ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಅತ್ತಿಹಳ್ಳಿ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 6.7.98 ರಿಂದ ಇಲ್ಲಿಯವರೆವಿಗೂ ಅನಧಿಕೃತ ಗೈರುಹಾಜರಾದ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ಲಿಖಿತ ಅಹವಾಲನ್ನು ಸಲ್ಲಿಸದೇ ಇದ್ದಕಾರಣ ಪರಿಶೀಲಿಸಿ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (2) ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು ಜಾಗೃತಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದು ಮೇಲೆ ಓದಲಾದ (3) ರಂತೆ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ. ಮೇಲೆ ಓದಲಾದ (4) ರಲ್ಲಿನ ಸೂಚನಾಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ನೌಕರರಿಗೆ ಜಾರಿಗೊಳಿಸಿದ್ದನುಗುಣವಾಗಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುವುದಿಲ್ಲ, ಈ ಬಗ್ಗೆ ದಿನಾಂಕ: 8.6.2005ರ ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟಣೆ ನೀಡಿ ಲಿಖಿತ ಹೇಳಿಕೆ ಸಲ್ಲಿಸುವಂತೆ ಸೂಚಿಸಲಾಗಿದ್ದರೂ, ನೌಕರರು ವಿಚಾರಣೆಗೆ ಹಾಜರಾಗದೆ ಲಿಖಿತ ಹೇಳಿಕೆಯನ್ನು ಸಲ್ಲಿಸದೆ ಗೈರು ಹಾಜರಾಗಿರುವುದರಿಂದ ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್:3:ಸಿಆರ್:48:2001-02, ಬೆಂಗಳೂರು, ದಿನಾಂಕ: 19ನೇ ಜುಲೈ 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಮೊಹಮ್ಮದ್ ಸನಾವುಲ್ಲ, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀಮತಿ ಸುರಯ್ಯ ಪರ್ವಿನ್, ದ್ವಿತೀಯ ದರ್ಜೆ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಅತ್ತಿಹಳ್ಳಿ, ಹಾಸನ ಜಿಲ್ಲೆ ಇವರು ದಿನಾಂಕ: 6.7.98 ರಿಂದ ಇಲ್ಲಿಯವರೆವಿಗೂ ಅನಧಿಕೃತ ಗೈರುಹಾಜರಾದ ಬಗ್ಗೆ ವಿಚಾರಣೆಯಿಂದ ದೃಢಪಟ್ಟಿರುವುದರಿಂದ ಈ ನೌಕರರನ್ನು ಕೆ.ಸಿ.ಎಸ್.(ಸಿಸಿಎ) ನಿಯಮ 8(viii)ರ ಪ್ರಕಾರ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿದ್ದೇನೆ.

**ಮೊಹಮ್ಮದ್ ಸನಾವುಲ್ಲ**
ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

ಪಿ.ಆರ್. 1073

## ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಕೋಲಾರ ಉಪವಿಭಾಗ, ಕೋಲಾರ

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ರೀತ್ಯಾ ಅವಾರ್ಡ್‌ಗಿಂತ ಪೂರ್ವವಾಗಿ ಸ್ಥಿರಾಸ್ತಿಗಳ ಜಪ್ತಿ ಬಗ್ಗೆ ನೀಡಲಾದ ನೋಟೀಸ್**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69ರ ರೀತ್ಯಾ ರೂ.12,40,086-00 ಗಳ ವಸೂಲಾತಿಗಾಗಿ ಶ್ರೀ ಬಿ.ಎಸ್. ರಾಮಕೃಷ್ಣಯ್ಯ, ವ್ಯವಸ್ಥಾಪಕರು, ಹಾಲಿ ಅಮಾನತ್, ಶ್ರೀನಿವಾಸಪುರ, ಕಸಬಾ ವ್ಯವಸಾಯ ಸೇವಾ ಸಹಕಾರ ಸಂಘ ಬ್ಯಾಂಕ್ ನಿ, ಶ್ರೀನಿವಾಸಪುರ ತಾಲ್ಲೂಕು, ಇವರ ವಿರುದ್ಧ ಸ್ವಯಂ ಪ್ರೇರಿತ ಅಧಿಭಾರ ಪ್ರಕರಣಗಳನ್ನು ದಾಖಲಿಸಿದ್ದು ಇವುಗಳ ಕ್ರಮಾಂಕ: ಎಆರ್-49:ಎಂಕೆಪಿ:ಸರ್‌ಚಾರ್ಜ್: 25:2004-05, ಮತ್ತು ಎಆರ್-49:ಎಂಕೆಪಿ:ಸರ್‌ಚಾರ್ಜ್:8:2005-06 ಆಗಿರುತ್ತದೆ.

ಶ್ರೀ ಬಿ.ಎಸ್. ರಾಮಕೃಷ್ಣಯ್ಯ, ವ್ಯವಸ್ಥಾಪಕರು (ಹಾಲಿ ಅಮಾನತ್) ಶ್ರೀನಿವಾಸಪುರ ಕಸಬಾ ವ್ಯವಸಾಯ ಸೇವಾ ಸಹಕಾರ ಸಂಘ ಬ್ಯಾಂಕ್ ನಿ., ಶ್ರೀನಿವಾಸಪುರ ತಾಲ್ಲೂಕು, ಇವರ ವಿರುದ್ಧ ನಡೆಸುತ್ತಿರುವ ಅಧಿಭಾರ ಪ್ರಕರಣಗಳಲ್ಲಿ ನೀಡಬಹುದಾದ ಆದೇಶ ತೀರ್ಪನ್ನು ನಿರರ್ಥಕಗೊಳಿಸಲು ಉದ್ದೇಶಿಸಿರುತ್ತಾರೆಂದು ನನ್ನ ಗಮನಕ್ಕೆ ಬಂದಿದ್ದು ಕಾರಣ ಶ್ರೀ ಬಿ.ಎಸ್. ರಾಮಕೃಷ್ಣಯ್ಯ ಬಿನ್ ಸೀತಾರಾಮಯ್ಯ, ಇವರ ಪತ್ನಿಯ ಹೆಸರಿನಲ್ಲಿರತಕ್ಕ ಜಮೀನುಗಳು ಮತ್ತು ಮನೆಗಳನ್ನು ಪರಭಾರೆ ಮಾಡಲು ಡಿಕ್ರಿಯಿಸಲು ಉದ್ದೇಶಿಸಿರುತ್ತಾರೆಂದು ತಿಳಿದುಬಂದಿದ್ದು ಸದರೀಯವರು ಈ ರೀತಿ ಮಾಡುವುದರಿಂದ ಸರ್ಕಾರಕ್ಕೆ ಬರಬೇಕಾದ ವಸೂಲಾತಿಯು ಮೇಲ್ಕಂಡ ಪ್ರಕರಣಗಳಲ್ಲಿ ಡಿಕ್ರಿ ಅವಾರ್ಡು ಇವರ ವಿರುದ್ಧ ಪಡೆದಾಗ್ಯೂ ಸಹಾ ಫಲಕಾರಿಯಾಗಿರುವುದಿಲ್ಲ.

ಶ್ರೀ ಬಿ.ಎಸ್. ರಾಮಕೃಷ್ಣಯ್ಯ ಬಿನ್ ಸೀತಾರಾಮಯ್ಯ, ಅಮಾನತ್ ವ್ಯವಸ್ಥಾಪಕರು, ಶ್ರೀನಿವಾಸಪುರ ಕಸಬಾ ವ್ಯವಸಾಯ ಸೇವಾ ಸಹಕಾರ ಸಂಘ ಬ್ಯಾಂಕ್ ನಿ, ಶ್ರೀನಿವಾಸಪುರ ತಾಲ್ಲೂಕು, ಇವರು ತಮ್ಮ ವಿರುದ್ಧ ಮಾಡಬಹುದಾದ ಡಿಕ್ರಿ:ಅವಾರ್ಡುಗಳ ವಸೂಲಾತಿಗಾಗಿ ಮೇಲೆ ತಿಳಿಸಿದಂತೆ ಚರ:ಸ್ಥಿರ ಸ್ವತ್ತುಗಳನ್ನು ಪರಭಾರೆ ಮಾಡಲು ಉದ್ದೇಶಿಸಿರುತ್ತಾರೆಂದು ಪೂರ್ಣವಾಗಿ ಮನಗೊಂಡಿರುವುದರಿಂದ ಈ ಕೆಳಕಂಡ ಆದೇಶ ನೀಡಲಾಗಿದೆ.

**ಆದೇಶ**

**ಕ್ರಮ ಸಂಖ್ಯೆ: ಎಂಕೆಪಿ:ಎಬಿಜೆ-56:2005-06, ದಿನಾಂಕ: 12/18ನೇ ಜುಲೈ 2005**

ಮೇಲೆ ವಿವರಿಸುವ ಕಾರಣಗಳಿಗಾಗಿ ಹಾಗೂ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ಮೇರೆಗೆ ಹಾಗೂ ಸರ್ಕಾರೀ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯು:ಸಿಎಲ್ಎಂ:91ರ ಮೇರೆಗೆ ನನಗೆ ದತ್ತವಾಗಿರುವ ಅಧಿಕಾರದನ್ವಯ ಕೋಲಾರ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರಾದ ಶ್ರೀ ಉಮಾಕಾಂತ ಆದ ನಾನು ಈ ಕೆಳಗಿನ ಷೆಡ್ಯೂಲ್‌ನಲ್ಲಿ ವಿವರಿಸಲಾದಂತಹ ಶ್ರೀ ಬಿ.ಎಸ್. ರಾಮಕೃಷ್ಣಯ್ಯ ಬಿನ್ ಸೀತಾರಾಮಯ್ಯ ಅಮಾನತ್ ವ್ಯವಸ್ಥಾಪಕರು, ಶ್ರೀನಿವಾಸಪುರ ಕಸಬಾ ವ್ಯವಸಾಯ ಸೇವಾ ಸಹಕಾರ ಸಂಘ ಬ್ಯಾಂಕ್ ನಿ, ಶ್ರೀನಿವಾಸಪುರ ತಾಲ್ಲೂಕು, ಇವರ ಪತ್ನಿಯ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಮೇಲೆ ವಿವರಿಸಿದ ಅಧಿಭಾರ ಪ್ರಕರಣದ ತೀರ್ಪನ್ನು ಕಾಯ್ದಿರಿಸಿ ಷರತ್ತುಗಳಿಗೊಳಪಟ್ಟು ಜಪ್ತಿಮಾಡಲು ಆದೇಶಿಸಿರುತ್ತೇನೆ.

ಆದ್ದರಿಂದ ಶ್ರೀ ಬಿ.ಎಸ್. ರಾಮಕೃಷ್ಣಯ್ಯ ಅಮಾನತ್ ವ್ಯವಸ್ಥಾಪಕರು, ಶ್ರೀನಿವಾಸಪುರ ಕಸಬಾ ವ್ಯವಸಾಯ ಸೇವಾ ಸಹಕಾರ ಸಂಘ ಬ್ಯಾಂಕ್ ನಿ, ಶ್ರೀನಿವಾಸಪುರ ತಾಲ್ಲೂಕು, ಇವರು ಈ ಷರತ್ತುಗೊಳಪಟ್ಟು ಆದೇಶವನ್ನು ತೆರವು ಮಾಡಿಸಲು ಇಚ್ಛಿಸಿದ್ದಲ್ಲಿ ರೂ.12,40,086.00 ಗಳನ್ನು ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ, ಇದರ ಕೇಂದ್ರ ಕಛೇರಿಯಲ್ಲಿ ಅಮಾನತ್ ಖಾತೆಯಲ್ಲಿ ರೇವಣಿ ಮಾಡಿ ರೇವಣಿ ಮಾಡಿದ ಬಗ್ಗೆ ದಾಖಲೆಗಳನ್ನು ದಿನಾಂಕ: 30.7.2005ರ ಒಳಗೆ ಈ ಕಛೇರಿಗೆ ತಂದೊದಗಿಸಲು ಸೂಚಿಸಿದೆ. ತಪ್ಪಿದಲ್ಲಿ ಈ ಆದೇಶವನ್ನು ಸ್ಥಿರಗೊಳಿಸಲಾಗುವುದೆಂದು ತಿಳಿಯತಕ್ಕದ್ದು.

ಈ ಕೆಳಗೆ ನಮೂದಿಸಿರುವ ಷೆಡ್ಯೂಲ್‌ನಲ್ಲಿ ಸೂಚಿಸಿರುವ ಸ್ಥಿರಾಸ್ತಿಯನ್ನು ಯಾರಾದರೂ ಕೊಂಡುಕೊಳ್ಳಲು ಪಡೆದುಕೊಳ್ಳಲು ಉದ್ದೇಶಿಸಿದಲ್ಲಿ ಸದರೀಯವರು ಈ ಮೇಲೆ ತಿಳಿಸಲಾಗಿರುವ ಜಪ್ತಿ ಆದೇಶದ ನೋಟೀಸ್ ಷರತ್ತಿಗೊಳಪಟ್ಟಿರುತ್ತದೆ.

**"ಷೆಡ್ಯೂಲ್"**

ಈ ಕೆಳಕಂಡ ಸ್ವತ್ತುಗಳು ಶ್ರೀ ಬಿ.ಎಸ್. ರಾಮಕೃಷ್ಣಯ್ಯ, ಅಮಾನತ್ ವ್ಯವಸ್ಥಾಪಕರು, ಶ್ರೀನಿವಾಸಪುರ ಕಸಬಾ ವ್ಯವಸಾಯ ಸೇವಾ ಸಹಕಾರ ಸಂಘ ಬ್ಯಾಂಕ್ ನಿ, ಶ್ರೀನಿವಾಸಪುರ ತಾಲ್ಲೂಕು ಇವರ ಪತ್ನಿ ಶ್ರೀಮತಿ ಬಿ.ವಿ. ವೆಂಕಟಲಕ್ಷ್ಮಮ್ಮ ಇವರಿಗೆ ಸಂಬಂಧಿಸಿದ ಆಸ್ತಿಯ ವಿವರಗಳಾಗಿರುತ್ತದೆ.

| ಕ್ರ.ಸಂ. | ಕಟ್ಟೆದಾರರ ಹೆಸರು ಮತ್ತು ಸ್ವತ್ತಿನ ಸ್ಥಳ | ಖಾತೆ ನಂ. | ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1) | ಶ್ರೀಮತಿ ಬಿ.ವಿ. ವೆಂಕಟಲಕ್ಷ್ಮಮ್ಮ ಕೋಂ ಬಿ.ಎಸ್. ರಾಮಕೃಷ್ಣಯ್ಯ, ಚಿಂತಾಮಣಿ. | 4548 | 4223 | 40X30+40X12$^1/_2$ | ಮನೆ |
| 2) | ಶ್ರೀಮತಿ ಬಿ.ವಿ. ವೆಂಕಟಲಕ್ಷ್ಮಮ್ಮ ಕೋಂ ಬಿ.ಎಸ್. ರಾಮಕೃಷ್ಣಯ್ಯ, ಚಿಂತಾಮಣಿ. | 5935 | 5507 | $\frac{19+21^1/_2}{2} + \frac{49+56}{2}$ | ಮನೆ |

**ಉಮಾಕಾಂತ**

ಪಿ.ಆರ್. 1074 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ.

## ಕಾರ್ಯಪಾಲಕ ಇಂಜಿನಿಯರ್ ಹಾಗೂ ಕರ್ನಾಟಕ ರಾಜ್ಯ ಹೆದ್ದಾರಿ ಪ್ರಾಧಿಕಾರ, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ

**ಪ್ರಕಟಣೆ**

**ಸಂಖ್ಯೆ: ಕಾಇ:ಶಿವಿಶಿ:ರೆಸ:ಸಂಚಾರ ನಿಷೇದ:2005-06/1367, ದಿನಾಂಕ: 21ನೇ ಜುಲೈ 2005**

ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕು, ಭದ್ರಾವತಿಯಿಂದ ಹೊಳೆಹೊನ್ನೂರಿಗೆ ಸೇರುವ ಜಿಲ್ಲಾ ಮುಖ್ಯ ರಸ್ತೆಯ 15ನೇ ಕಿ.ಮೀ.ನಲ್ಲಿರುವ ಸೇತುವೆಯು ಶಿಥಿಲವಾಗಿ ವಾಹನ ಸಂಚಾರಕ್ಕೆ ಯೋಗ್ಯವಾಗಿಲ್ಲದಿರುವುದರಿಂದ ರಾಜ್ಯ ಹೆದ್ದಾರಿ ಅಧಿನಿಯಮ 1964ರ ಸೆಕ್ಷನ್ 50 ರಲ್ಲಿ ದತ್ತವಾದ ಅಧಿಕಾರದಂತೆ, ಪಿ.ಆರ್. ಗಿರಿಯಪ್ಪ ಕಾರ್ಯಪಾಲಕ ಅಭಿಯಂತರರು ಹಾಗೂ ಕರ್ನಾಟಕ ರಾಜ್ಯ ಹೆದ್ದಾರಿ ಪ್ರಾಧಿಕಾರ ಶಿವಮೊಗ್ಗ, ಆದ ನಾನು ಮುಂದಿನ ಆದೇಶದವರೆಗೆ ಈ ಸೇತುವೆಯ ಮೇಲೆ ವಾಹನ ಸಂಚಾರವನ್ನು ಕೂಡಲೇ ಜಾರಿಗೆ ಬರುವಂತೆ ನಿಷೇದಿಸಿರುತ್ತೇನೆ.

ಸಾರ್ವಜನಿಕರು ಬದಲಿ ರಸ್ತೆಗಳಾದ ಭದ್ರಾವತಿಯಿಂದ ಕೂಡ್ಲಿಗೆರೆ - ಕಮ್ಮರಗಟ್ಟ ಮುಖಾಂತರ ಹೊಳೆಹೊನ್ನೂರು ಅಥವಾ ಭದ್ರಾವತಿ - ಹೊಳೆಹೊನ್ನೂರು ರಸ್ತೆಯ 13.50 ಕಿ.ಮೀ.ನಿಂದ ಎಮ್ಮೆಹಟ್ಟಿ - ಕೆರೆ ಬೀರನಹಳ್ಳಿ ಮಾರ್ಗವಾಗಿ ಹೊಳೆಹೊನ್ನೂರು ಸೇರುವ ರಸ್ತೆಗಳಲ್ಲಿ ಸಂಚರಿಸಬೇಕಾಗಿ ಕೋರಲಾಗಿದೆ.

ಕಾರ್ಯಪಾಲಕ ಇಂಜಿನಿಯರ್ ಹಾಗೂ ಕರ್ನಾಟಕ ರಾಜ್ಯ ಹೆದ್ದಾರಿ ಪ್ರಾಧಿಕಾರ,
ಪಿ.ಆರ್. 1075 ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ.

## ಜಿಲ್ಲಾ ಅಧಿಕಾರಿಗಳವರ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ

### ಪ್ರಕಟಣೆ

**ಸಂಖ್ಯೆ: ಬಿಸಿಎಂ/ವಿನಿ.6/ವಿವ25/2005-06, ದಿನಾಂಕ: 26ನೇ ಜುಲೈ 2005**

**ವಿಷಯ :** ಅಲ್ಪಸಂಖ್ಯಾತರ ಇಲಾಖೆಯಲ್ಲಿ ವೃತ್ತಿ ತರಬೇತಿ ಕಾರ್ಯಕ್ರಮವನ್ನು ಜಾರಿಗೊಳಿಸುವ ಬಗ್ಗೆ.

**ಉಲ್ಲೇಖ :** 1) ದಿನಾಂಕ: 4.7.2001ರ ನಿರ್ದೇಶಕರ ಪತ್ರದ ಸಂಖ್ಯೆ: ಅಸಂನಿ/ವಿನಿ. /ಸಿಆರ್.103/2001-02, ದಿನಾಂಕ: 4.7.2001 ಮತ್ತು 9.1.2001.

2) ನಿರ್ದೇಶಕರು, ಅಲ್ಪಸಂಖ್ಯಾತರ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಅಸಂನಿ/ವೃತ್ತಿ/ಸಿಆರ್.50/2003-04, ದಿನಾಂಕ: 17.6.2003.

2005-06ನೇ ಸಾಲಿಗೆ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ನಿರುದ್ಯೋಗಿ ಯುವಕ, ಯುವತಿಯರಿಗೆ ವಿವಿಧ ವೃತ್ತಿ ತರಬೇತಿ ನೀಡುವ ಕಾರ್ಯಕ್ರಮವನ್ನು ಜಾರಿಗೊಳಿಸಲು ಉದ್ದೇಶಿಸಲಾಗಿದ್ದು ಸದರಿ ಕಾರ್ಯಕ್ರಮದನ್ವಯ ಶಿವಮೊಗ್ಗ ಜಿಲ್ಲೆಗೆ ಸೇರಿದ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ (ಈ ಪ್ರಕಟಣೆಯೊಡನೆ ಲಗತ್ತಿಸಿದ ಅನುಬಂಧದಂತೆ) ತರಬೇತಿಯನ್ನು ನೀಡಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ.

### ನಿಬಂಧನೆಗಳು

1. ಅಭ್ಯರ್ಥಿಗಳು ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಪಾರ್ಸಿ, ಬೌದ್ಧ, ಸಿಖ್ ಮುಂತಾದ ಮತೀಯ ಅಲ್ಪಸಂಖ್ಯಾತರ ಜನಾಂಗಕ್ಕೆ ಸೇರಿರಬೇಕು.
2. ತರಬೇತಿಗೆ ಆಯ್ಕೆ ಮಾಡುವ ಅಭ್ಯರ್ಥಿಗಳ ವಿದ್ಯಾರ್ಹತೆ ಎಸ್.ಎಸ್.ಎಲ್.ಸಿ. ಆಗಿರಬೇಕು. (ಉತ್ತೀರ್ಣ ಅಥವಾ ಅನುತ್ತೀರ್ಣರಾಗಿರಬೇಕು)
3. ಅಭ್ಯರ್ಥಿಯ ವಯೋಮಿತಿ ಕನಿಷ್ಠ 18 ವರ್ಷ ಹಾಗೂ ಗರಿಷ್ಠ 40 ವರ್ಷಗಳೆಂದು ನಿಗದಿಪಡಿಸಿದೆ.
4. ಅಭ್ಯರ್ಥಿಗಳ ಪೋಷಕರ ವಾರ್ಷಿಕ ಆದಾಯ ರೂ.48.000=00 ಕ್ಕಿಂತ ಹೆಚ್ಚಿರಬಾರದು.
5. ಸದರಿ ತರಬೇತಿಯನ್ನು ಒಂದಕ್ಕಿಂತ ಹೆಚ್ಚುಬಾರಿ ಪಡೆಯಲು ಅವಕಾಶವಿರುವುದಿಲ್ಲ.
6. ಅಭ್ಯರ್ಥಿಗಳು ತರಬೇತಿಗಾಗಿ ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸತಕ್ಕದ್ದು.
7. ಅರ್ಜಿ ಸಲ್ಲಿಸಲು ಕಡೆಯ ದಿನಾಂಕ: 12.8.2005.

ಹೆಚ್ಚಿನ ವಿವರಗಳಿಗೆ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ ಹಾಗೂ ಕಾರ್ಯನಿರ್ವಾಹಕ ಅಧಿಕಾರಿಗಳು ಎಲ್ಲಾ ತಾಲ್ಲೂಕು ಪಂಚಾಯತ್, ಶಿವಮೊಗ್ಗ ಜಿಲ್ಲೆ ಇಲ್ಲಿ ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳನ್ನು ಕಛೇರಿಯ ವೇಳೆಯಲ್ಲಿ ಸಂಪರ್ಕಿಸಬಹುದು.

ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ.

### ಅನುಬಂಧ

| ಕ್ರಮ ಸಂಖ್ಯೆ | ವೃತ್ತಿ ತರಬೇತಿ ಕೋರ್ಸ್ ಕೋಡ್ ಮತ್ತು ಕೋರ್ಸಿನ ಹೆಸರು | ತರಬೇತಿ ನೀಡುವ ಸಂಸ್ಥೆಯ ಹೆಸರು | ಅಭ್ಯರ್ಥಿಗಳ ಸಂಖ್ಯೆ | ತರಬೇತಿ ಅವಧಿ | ತರಬೇತಿ ಶುಲ್ಕ ಕೋರ್ಸಿಗೆ | ಮಾಸಿಕ ಸ್ಟೈಫಂಡ್ |
|---|---|---|---|---|---|---|
| 1 | ಎಡಿ-01 ಫ್ಯಾಷನ್ ಡಿಸೈನಿಂಗ್ | ಸರ್ಕಾರಿ ರೆಸಿಡೆನ್ಷಿಯಲ್ ಮಹಿಳಾ ಪಾಲಿಟೆಕ್ನಿಕ್ ಶಿವಮೊಗ್ಗ | 10 | 6 ತಿಂಗಳು | 3000=00 | 500=00 |
| 2 | ಇಸಿ-01 ಸರ್ವಿಸಿಂಗ್ ಎಲೆಕ್ಟ್ರಾನಿಕ್ಸ್ ಎಕ್ವಿಪ್‌ಮೆಂಟ್ | ಸರ್ಕಾರಿ ಪಾಲಿಟೆಕ್ನಿಕ್, ಸೊರಬ | 10 | 3 ತಿಂಗಳು | 3000=00 | 500=00 |
| 3 | ಇಇ-04 ಎಲೆಕ್ಟ್ರಿಕಲ್ ವೈರ್‌ಮೆನ್ ಟ್ರೈನಿಂಗ್ ಫಾರ್ ವೈರಿಂಗ್ ಲೈಸನ್ಸ್ | ಸರ್ಕಾರಿ ವಿ.ಐ.ಎಸ್.ಎಸ್.ಜೆ. ಪಾಲಿಟೆಕ್ನಿಕ್, ಭದ್ರಾವತಿ | 10 | 1 ತಿಂಗಳು | 1500=00 | 500=00 |

ಜಿಲ್ಲಾ ಅಧಿಕಾರಿಗಳು,
ಪಿ.ಆರ್. 1076 ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ.

**ಆರ್ಥಿಕ ಇಲಾಖೆ**

**ಅಧಿಕೃತ ಜ್ಞಾಪನ**

**ಸಂಖ್ಯೆ: ಆಇ 76 ಸಉಲಾ 2005, ಬೆಂಗಳೂರು, ದಿನಾಂಕ: 15ನೇ ಜುಲೈ 2005**

**ವಿಷಯ :** ದಿನಾಂಕ: 01.01.2005 ರಲ್ಲಿದ್ದಂತೆ ಸಣ್ಣ ಉಳಿತಾಯ ಇಲಾಖೆಯಲ್ಲಿನ ಸಹಾಯಕ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ ಪ್ರಚುರಪಡಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಆಇ 105 ಸಉಲಾ 2004, ದಿನಾಂಕ: 25.06.2004.

ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ಸಹಾಯಕ ನಿರ್ದೇಶಕರುಗಳ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01.01.2005 ರಲ್ಲಿದ್ದಂತೆ ಈ ಕೆಳಕಂಡಂತೆ ಪ್ರಕಟಿಸಲಾಗಿದೆ:

| ಕ್ರ. ಸಂ. | ಅಧಿಕಾರಿಯ ಹೆಸರು **ಶ್ರೀ:ಶ್ರೀಮತಿ** | ಜನ್ಮ ದಿನಾಂಕ | ಸರ್ಕಾರದ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 1 | ಎ.ಆರ್. ಸತ್ಯನಾರಾಯಣ | 04.09.1952 | 01.10.1981 | 17.09.1988 | 17.09.1988 |
| 2 | ಜಿ.ಎಂ. ಶೆಡೋಳೆ | 25.09.1952 | 25.11.1977 | 11.12.1988 | 11.12.1988 |
| 3 | ಪಿ. ದೇವೇಂದ್ರಸ್ವಾಮಿ | 08.09.1951 | 05.11.1981 | 01.04.1990 | 01.04.1990 |
| 4 | ಸಿ. ಕೃಷ್ಣಪ್ಪ | 09.06.1955 | 01.10.1981 | 01.04.1990 | 01.04.1990 |
| 5 | ಮಹಮದ್ ಫಜಲುಲ್ಲಾ | 18.05.1949 | 05.12.1983 | 01.06.1992 | 01.06.1992 |
| 6 | ಹೆಚ್. ರುದ್ರಪ್ಪ | 01.06.1954 | 27.03.1984 | 01.06.1992 | 01.06.1992 |
| 7 | ಟಿ. ಪುಟ್ಟಸ್ವಾಮಿ | 01.05.1954 | 01.12.1983 | 28.05.1992 | 28.05.1992 |
| 8 | ಮಹದೇವ ಮಡಿವಾಳ | 01.04.1953 | 11.07.1985 | 17.11.1992 | 16.11.1992 |
| 9 | ಎನ್. ರಂಗಯ್ಯ | 29.09.1962 | 02.09.1985 | 11.07.1993 | 11.07.1993 |
| 10 | ಶಂಕರ್ ಭೀ. ನಾಯಕವಾಡಿ | 20.05.1958 | 30.03.1984 | 04.08.1995 | 04.08.1995 |
| 11 | ಶಿವಾನಂದ | 18.05.1955 | 03.04.1984 | 04.08.1995 | 04.08.1995 |
| 12 | ಕೆ. ಸಿದ್ದಪ್ಪ | 07.10.1956 | 26.03.1984 | 04.12.1995 | 04.12.1995 |
| 13 | ಎಂ.ಕೆ. ಹೆಗಡೆ | 14.06.1956 | 03.04.1984 | 04.12.1995 | 04.12.1995 |
| 14 | ಎಂ.ಬಿ. ಸಿದ್ದರಾಜು | 08.05.1952 | 30.09.1985 | 20.12.1995 | 04.12.1995 |
| 15 | ಎಸ್.ಆರ್. ದುಂಡಗಿ | 20.07.1961 | 30.03.1984 | 03.08.2001 | 02.08.2001 |
| 16 | ಎಸ್. ಶ್ರೀನಿವಾಸಯ್ಯ | 10.04.1954 | 04.04.1984 | 02.08.2001 | 02.08.2001 |
| 17 | ಕೆ. ಸುಲೋಚನ | 12.07.1957 | 29.03.1984 | 03.08.2001 | 02.08.2001 |
| 18 | ಎಂ.ಎಸ್. ಪಾಟೀಲ್ | 20.07.1956 | 26.03.1984 | 03.08.2001 | 02.08.2001 |
| 19 | ಬಿ. ಶಂಕರಗೊಲ್ಲ | 08.08.1949 | 26.03.1984 | 03.08.2001 | 02.08.2001 |
| 20 | ಡಿ. ಅರುಣಕುಮಾರ್ | 29.01.1949 | 21.04.1969 | 03.08.2001 | 02.08.2001 |
| 21 | ವಿ. ಕಲಾವತಿ | 22.10.1964 | 02.09.1985 | 04.08.2001 | 02.08.2001 |
| 22 | ಎಂ.ಎ. ಮೂಡಲಗಿ | 01.06.1960 | 04.09.1985 | 03.08.2001 | 02.08.2001 |
| 23 | ಕೆ.ಆರ್. ನಾಗೇಂದ್ರ ರಾವ್ | 28.04.1960 | 09.09.1985 | 09.08.2001 | 02.08.2001 |
| 24 | ಚಂದ್ರೇಗೌಡ | 18.07.1961 | 04.09.1985 | 03.08.2001 | 02.08.2001 |
| 25 | ಸಿ. ಪುಟ್ಟರಾಜು | 25.06.1960 | 25.09.1985 | 03.08.2001 | 02.08.2001 |
| 26 | ಬಿ. ಜಯಪ್ಪ | 03.06.1962 | 24.11.1988 | 03.08.2001 | 02.08.2001 |
| 27 | ಬಿ.ಜಿ. ಮಲ್ಲೇದೇವರು | 08.06.1954 | 05.09.1985 | 20.09.2001 | 13.09.2001 |
| 28 | ಜರೀನಾ ಎಂ. ಶೇಖ್ | 28.05.1954 | 06.09.1985 | 20.09.2001 | 13.09.2001 |
| 29 | ನಾಡಗಿರಿ ಶಂಕರ್ ಆರ್. | 19.07.1961 | 25.11.1988 | 18.09.2001 | 13.09.2001 |
| 30 | ಭೀಮಪ್ಪ | 01.01.1957 | 09.09.1985 | 17.09.2004 | 03.09.2004 |
| 31 | ಪಿ. ಲಿಂಗಪ್ಪ | 25.12.1954 | 02.09.1985 | 15.10.2004 | 03.09.2004 |

ಈ ಜೇಷ್ಠತಾ ಪಟ್ಟಿಯ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದರೆ ಅಂತಹ ಅಧಿಕಾರಿಗಳು ಈ ಅಧಿಕೃತ ಜ್ಞಾಪನ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆಗಳನ್ನು ಇಲಾಖಾ ನಿರ್ದೇಶಕರ ಮುಖಾಂತರ ಸರ್ಕಾರಕ್ಕೆ ಕಳುಹಿಸಿ ಕೊಡತಕ್ಕದ್ದು. ಈ ಅವಧಿಯೊಳಗೆ ಯಾವುದೇ ಆಕ್ಷೇಪಣೆಗಳು ಬಾರದಿದ್ದಲ್ಲಿ ಈ ಜೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಿ ಪ್ರಕಟಿಸಲು ಕ್ರಮ ತೆಗೆದುಕೊಳ್ಳಲಾಗುವುದು.

**ಎನ್. ಪ್ರಭಾಕರ್**

ಪಿ.ಆರ್.1079

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

## KARNATAKA ELECTRICITY REGULATORY COMMISSION BANGALORE

**Notification No.Y/01/4 dated: 17th August, 2005**

Amendment to KERC (Recovery of Expenditure for Supply of Electricity) Regulations, 2004.

**Preamble:**

Whereas, Section 46 of the Electricity Act, 2003 empowers the State Commission to authorize by way of regulations, a Distribution Licensee to charge from a person requiring a supply of electricity in pursuance of Section 43, any expenses reasonably incurred in providing any electrical line or plant used for the purpose of giving that supply, the Commission by virtue of the said powers, read with Section 181 of the Act has notified " KERC (Recovery of Expenditure for Supply of Electricity) Regulations, 2004" in the Notification no.Y/01/4 dated 12-11-2004 and the same was published in Part-3 of Gazette of Karnataka dated 16-12-2004 (Page nos.2216 to 2222). Certain difficulties in implementing the provisions of sub-clause no. 3.1.1, 3.1.5 and 3.1.7 of the said regulations have been brought to the notice of the Commission. Therefore, after examining the matter, the Commission deemed it appropriate to bring in certain amendments to these sub-clauses in order to remove the difficulties. Hence, this amendment is Notified.

### AMENDMENT

In exercise of the powers conferred by section 181 read with section 46 and sub-section (2) of section 43 of the Electricity Act 2003 (Central Act 36 of 2003) and all powers enabling it in that behalf, the Karnataka Electricity Regulatory Commission hereby makes the following Regulations further to amend KERC (Recovery of Expenditure for Supply of Electricity) Regulations, 2004.

**I. Title and commencement:**

a) These Regulations may be called the KERC (Recovery of Expenditure for Supply of Electricity) ( Second Amendment) Regulations, 2005.

b) These Regulations shall come into force from the date of publication in the official Gazette of Karnataka.

c) These Regulations shall extend to the whole of the state of Karnataka.

**II. Amendments to the following Regulations of KERC (Recovery of Expenditure for Supply of Electricity) Regulations, 2004:**

The existing sub-clauses as in column 3 of the Table below shall stand substituted by the provisions as in column 4:

| Sl. No. | Section No. | As Existing | As Amended |
|---|---|---|---|
| 1 | 2 | 3 | 4 |
| 2 | 3.1.1 | **Note:**<br>(a) The maximum limit of requisitioned load shall be less than 100 KW in case of domestic or commercial loads. In case the requisitioned load is 25 KW and above, sub-clause no. 3.1.5 of these regulations shall be applicable. | **Note:**<br>(a) The maximum limit of requisitioned load shall be less than 100 KW in case of commercial loads. In case the requisitioned load is 25 KW and above, sub-clause no. 3.1.5 of these regulations shall be applicable.<br><br>If the Requisitioned load is 100KW or more in case of Residential apartments/ complexes, L.T.supply to individual houses can be arranged at the request of the applicant subject to observing of all other conditions. |
| 2 | 3.1.5 | Where the requisitioned load is 25 KW or more or built up area in the premises of the Applicant exceeds 500 sq. meters, the Applicant shall provide the required space in his premises and also provide at his own cost electric line, | Where the requisitioned load is 25 KW or more or built up area in the premises of the Applicant exceeds 500 sq. meters, the Applicant shall provide the required space in his premises and also provide at his own cost electric line, |

| Sl. No. | Section No. | As Existing | As Amended |
|---|---|---|---|
| 2 | 3.1.5 | distribution transformer and associated equipments. The transformer so provided by the Applicant shall be dedicated to the premises of such applicant. The details of space to be provided by the Applicant are as follows:-<br>(a) An electrical room with RCC roof having clear floor area of 5 meters X 4 meters with a vertical clearance of 2.75 meters with locking facility, exhaust fans and adequate size of cable duct, shall be provided at the ground floor within the Applicant's premises nearer to the main entrance for installing floor mounted distribution transformer and Associated switchgear or<br>(b) A clear space of 3 meters 5 meters open to the sky shall be provided within the Applicant's premises preferably at the main entrance for installing structure mounted distribution transformer and switchgear.<br>**Note :(1)**<br>If the Applicant does not provide space, he is not entitled to get power supply. | distribution transformer and associated equipments. The transformer so provided by the Applicant shall be dedicated to the premises of such applicant. The details of space to be provided by the Applicant are as follows:-<br>(a) An electrical room with RCC roof having clear floor area of 5 meters X 4 meters with a vertical clearance of 2.75 meters with locking facility, exhaust fans and adequate size of cable duct, shall be provided at the ground floor within the Applicant's premises nearer to the main entrance for installing floor mounted distribution transformer and associated switchgear or<br>(b) A clear space of 3 meters 5 meters open to the sky shall be provided within the Applicant's premises preferably at the main entrance for installing structure mounted distribution transformer and switchgear.<br>**Note :(1)**<br>In the case of applicant whose building plan is sanctioned by the Local Authority prior to the date of publication of this amendment in the Gazette of Karnataka and if the applicant is unable to provide the space for erection of transformer, switchgear and other allied equipments, the Licensee shall arrange power supply to the Applicant from the existing transformer or by installing a new transformer duly collecting charges towards electric line and plant as indicated below:<br>a) Charges where the requisitioned load is above 25 kW and upto and inclusive of 50 kW:<br>Rs. 20,800/- plus Rs. 6500/- per kW for loads above 25 kW.<br>b) Charges where the requisitioned load is above 50 kW and upto and inclusive of 100 kW:<br>Rs. 1,83,300/- plus Rs. 19,500/- per kW for loads above 50 kW in BMP and BDA areas in Bangalore & Rs.13,000/- per kW in other areas. |

| Sl. No. | Section No. | As Existing | As Amended |
|---|---|---|---|
| 2 | 3.1.5 | Nil | In addition to the above Rs. 1000/- per kW for loads above 3 kW shall be collected in Bangalore (BMP and BDA) areas towards HT/LT UG cable system.<br><br>**Note: (1)(a)**<br>However in respect of new buildings whose building plan is sanctioned after the date of notification of this Amendment in the Gazette of Karnataka with requisitioned load of more than 25 KW or built up area is more than 500 Sq.Mtr. where space has to be provided for transformer and its allied equipments as per this Clause but not provided by the applicant, the Licensee shall not arrange power supply for such buildings. |
| | | **Note:(4)**<br>In case the sanctioned plan indicates two are more buildings in the same premises, they shall be clubbed together to calculate built up area. | **Note:(4)**<br>In case the sanctioned plan indicates two are more buildings in the same premises, they shall be clubbed together to calculate requisitioned load or built up area.<br><br>Whenever the requisitioned load or built up area is calculated in an applicant's premises, the requisitioned load or built up area of exempted category as per note-(5) to sub-clause no. 3.1.5 shall be excluded and the remaining requisitioned load or built up area shall be considered. |
| 3 | 3.1.7 | The above sub clause 3.1.5 is applicable to existing consumers seeking additional loads, where addition of such loads makes the total load to be 25 KW or above. Sub-clause 3.1.5 is also applicable to existing consumers when their total built up area exceeds 500 sq. meters. In such cases, the consumer shall provide space for the transformer as noted under sub-clause 3.1.5 and install the transformer at his own cost.<br>**Note :1)**<br>If the Applicant does not provide space, he is not entitled to get additional power supply. | The above sub clause 3.1.5 is applicable to existing consumers seeking additional loads, where addition of such loads makes the total load to be 25 kW or above. Sub-clause 3.1.5 is also applicable to existing consumers when their total built up area exceeds 500 sq. meters. In such cases, the consumer shall provide space for the transformer as noted under sub-clause 3.1.5 and install the transformer at his own cost.<br><br>**Note :1)**<br>If the applicant is unable to provide the space for erection of transformer, switchgear, and other allied equipments, the Licensee shall arrange power supply to the Applicant from the existing transformer or by installing a new transformer duly collecting charges towards electric line and plant for the additional requisitioned load. |

| Sl. No. | Section No. | As Existing | As Amended |
| --- | --- | --- | --- |
| 3 | 3.1.7 | 2) The additional amount of Rs.1000/- per KW applicable for Bangalore urban area (BMP and BDA areas) towards HT/LT UG cable system shall be collected in case of existing installations for the additional load sought for. | Where additional loads are requisitioned for existing installations and addition of such loads makes the total load to be 25 kW or above, the cost towards electric line/plant for the total load (existing +additional load) may be calculated as indicated below at appropriate slab rate and deduction allowed for any cost towards electric line/plant/service line paid previously:<br>**a) Charges where the total load is 25 kW and upto and inclusive of 50 kW:**<br>Rs. 20,800/- plus Rs. 6500/- per kW for loads above 25 kW.<br>**b) Charges where the total load is above 50 kW and upto and inclusive of 100 kW:**<br>**Rs. 1,83,300/- plus Rs. 19,500/- per kW for loads above 50 kW in BMP and BDA areas in Bangalore & Rs.13,000/- per kW in other areas.**<br>2) The additional amount of Rs.1000/- per KW applicable for Bangalore urban area (BMP and BDA areas) towards HT/LT UG cable system shall be collected in case of existing installations for the additional requisitioned load sought for. |

By Order of the Commission,

**M. NAGARAJ**

P.D. 68 Secretary I/C, Karnataka Electricity Regulatory Commission.

**ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು, ನಿರ್ದೇಶಕರ ನಡವಳಿಗಳು**

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ತಾಮಸಂದ್ರ ಗ್ರಾಮದಲ್ಲಿ ಮಲ್ಟಿ ಕಲರ್ ಗ್ರಾನೈಟ್‌ಗಾಗಿ ಮೆ: ಬಿಳಿಗಿರಿ ಗ್ರಾನೈಟ್, ಪ್ರೈ.ಲಿ. ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 476ರ ಗುತ್ತಿಗೆಯನ್ನು ಪುನರ್ ಸ್ಥಾಪಿಸುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಪತ್ರ ಸಂಖ್ಯೆ: ಸಿಐ 177 ಎಂಎಂಎನ್ 2004, ದಿನಾಂಕ: 18.06.2005.

2. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು 476:2003-04:18727, ದಿನಾಂಕ: 26.2.2004.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ತಾಮಸಂದ್ರ ಗ್ರಾಮದಲ್ಲಿ ಸರ್ವೆ ನಂ.84 ರಲ್ಲಿ ಮೆ: ಬಿಳಿಗಿರಿ ಗ್ರಾನೈಟ್ಸ್ ಪ್ರೈ.ಲಿ. ರವರಿಗೆ 5-10 ಎಕರೆ ವಿಸ್ತೀರ್ಣದಲ್ಲಿ ಮಲ್ಟಿ ಕಲರ್ ಗ್ರಾನೈಟ್‌ಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 476ರ ಗುತ್ತಿಗೆಯನ್ನು ದಿನಾಂಕ: 19.11.2001 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿದ ಕಾರಣ ದಿನಾಂಕ: 26.2.2004 ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53(2)ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು ಅದರಂತೆ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಈ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:476:2005-06/5338, ದಿನಾಂಕ: 21ನೇ ಜುಲೈ 2005**

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಸರ್ಕಾರದ ಪತ್ರದ ದಿನಾಂಕ: 18.06.2005 ರಲ್ಲಿ ನಿರ್ದೇಶಿಸಿರುವಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ತಾಮಸಂದ್ರ ಗ್ರಾಮದ ಸರ್ವೆ ನಂ.84 ರಲ್ಲಿ 5-10 ಎಕರೆಗೆ ಮಲ್ಟಿ ಕಲರ್ ಗ್ರಾನೈಟ್‌ಗಾಗಿ ಮೆ: ಬಿಳಿಗಿರಿ ಗ್ರಾನೈಟ್ಸ್ ಪ್ರೈ.ಲಿ. ಸಂಸ್ಥೆಗೆ ಮಂಜೂರು ಮಾಡಲಾದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 476ರ ಗುತ್ತಿಗೆಯನ್ನು ರದ್ದುಗೊಳಿಸಿದ ದಿನಾಂಕ: 26.2.2004 ರಿಂದ ಗುತ್ತಿಗೆಯನ್ನು ಪುನರ್ ಸ್ಥಾಪಿಸಿ, ಗುತ್ತಿಗೆ ಮೇಲಿನ ಇಲ್ಲಿಯ ವರೆಗಿನ ರಾಜಧನಸ್ಥಿರ ತೆರಿಗೆಯನ್ನು ಪೂರ್ಣವಾಗಿ ಪಾವತಿಸುವಂತೆ ತಿಳಿಸಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮಗಳ ಷರತ್ತಿನಂತೆ ಮುಂದುವರೆಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ. ಸದರಿ ಕಲ್ಲು ಗಣಿ ಗುತ್ತಿಗೆ ಅವಧಿ ಹಾಗೂ ಇನ್ನಿತರ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ನಿರ್ದೇಶಕರು.

ಪಿ.ಆರ್. 1082 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಪೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

### ಸಂಖ್ಯೆ: 18/ಸಂವಿ/ಸಿ.ಓ.ಪಿ/2005, ಬೆಂಗಳೂರು, ದಿನಾಂಕ: 16ನೇ ಆಗಸ್ಟ್ 2005

ಬೆಂಗಳೂರು ನಗರ - ಅಶೋಕನಗರ ಸಂಚಾರ ಪೊಲೀಸ್ ಠಾಣೆ ಸರಹದ್ದಿನ ಬರ್ಲಿ ಸ್ಟ್ರೀಟ್ ಮತ್ತು ಲಾಂಗ್‌ಫೋರ್ಡ್ ರಸ್ತೆಗಳು ಕಿರಿದಾಗಿದ್ದು, ಈ ರಸ್ತೆಗಳಲ್ಲಿ ದ್ವಿಮುಖ ಸಂಚಾರ ವ್ಯವಸ್ಥೆ ಇದ್ದು, ವಾಹನಗಳ ಸಂಚಾರ ಅಧಿಕವಾಗಿರುತ್ತದೆ. ಹೊಸೂರು ರಸ್ತೆಯಲ್ಲಿ ಎರಡೂ ಕಡೆಗಳಿಂದ ಬಂದಂತ ವಾಹನಗಳು ಸಿ.ಎಂ.ಪಿ. ಗೇಟ್ ಜಂಕ್ಷನ್ ಬಳಿ ಲಾಂಗ್ ಫೋರ್ಡ್ ರಸ್ತೆಗೆ ಬಲ ಮತ್ತು ಎಡ ತಿರುವು ತೆಗೆದುಕೊಳ್ಳುವ ಸಮಯದಲ್ಲಿ ಸಂಚಾರ ಸ್ಥಗಿತಗೊಳ್ಳುತ್ತಿರುವುದಲ್ಲದೆ ಸುಗಮ ಸಂಚಾರಕ್ಕೆ ಅಡಚಣೆ ಉಂಟಾಗುತ್ತಿರುತ್ತೆ. ಬರ್ಲಿ ಸ್ಟ್ರೀಟ್‌ನಲ್ಲೂ ಸಹ ದ್ವಿಮುಖ ಸಂಚಾರ ವ್ಯವಸ್ಥೆಯಿಂದ ವಾಹನಗಳು ಸರಾಗವಾಗಿ ಸಂಚರಿಸಲು ಸಾಧ್ಯವಾಗದೆ ಸಂಚಾರ ಸ್ಥಗಿತಕ್ಕೆ ಕಾರಣವಾಗಿದೆ. ಪ್ರಯುಕ್ತ ಹೊಸೂರು ರಸ್ತೆಯ ಸಿ.ಎಂ.ಪಿ. ಗೇಟ್ ಜಂಕ್ಷನ್‌ನಲ್ಲಿನ ಸಂಚಾರ ಸ್ಥಗಿತವನ್ನು ತಹಬಂದಿಗೆ ತರುವ ಸಲುವಾಗಿ, ಹಾಗೂ ಬರ್ಲಿ ಸ್ಟ್ರೀಟ್ ಮತ್ತು ಲಾಂಗ್‌ಫೋರ್ಡ್ ರಸ್ತೆಯಲ್ಲಿ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವ ಸಲುವಾಗಿ ಲಾಂಗ್‌ಫೋರ್ಡ್ ರಸ್ತೆಯಲ್ಲಿ ಬರ್ಲಿ ಸ್ಟ್ರೀಟ್ ಮತ್ತು ಲಾಂಗ್‌ಫೋರ್ಡ್ ರಸ್ತೆ ಜಂಕ್ಷನ್‌ನಿಂದ ಹೊಸೂರು ರಸ್ತೆ ಸಿ.ಎಂ.ಪಿ. ಗೇಟ್ ವರೆಗೂ ಹಾಗೂ ಬರ್ಲಿ ಸ್ಟ್ರೀಟ್‌ನಲ್ಲಿ ಹೊಸೂರು ಲಷ್ಕರ್ ರಸ್ತೆ ಜಂಕ್ಷನ್‌ನಿಂದ ಬರ್ಲಿ ಸ್ಟ್ರೀಟ್ ಮತ್ತು ಲಾಂಗ್‌ಫೋರ್ಡ್ ರಸ್ತೆ ಜಂಕ್ಷನ್‌ವರೆಗೆ ಏಕಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೆ ತರುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಅಜಯಕುಮಾರ ಸಿಂಹ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧಗಳನ್ನು ಆದೇಶಿಸಿರುತ್ತೇನೆ.

**1. ಲಾಂಗ್‌ಫೋರ್ಡ್ ರಸ್ತೆ:** ಲಾಂಗ್‌ಫೋರ್ಡ್ ರಸ್ತೆಯಲ್ಲಿ ಬರ್ಲಿ ಸ್ಟ್ರೀಟ್ ಮತ್ತು ಲಾಂಗ್‌ಫೋರ್ಡ್ ರಸ್ತೆ ಜಂಕ್ಷನ್‌ನಿಂದ ಹೊಸೂರು ರಸ್ತೆ ಸಿ.ಎಂ.ಪಿ. ಗೇಟ್ ವರೆಗೂ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ಬರ್ಲಿ ಸ್ಟ್ರೀಟ್ ಮತ್ತು ಲಾಂಗ್‌ಫೋರ್ಡ್ ರಸ್ತೆ ಜಂಕ್ಷನ್‌ನಿಂದ ಹೊಸೂರು ರಸ್ತೆ ಸಿ.ಎಂ.ಪಿ. ಗೇಟ್‌ವರೆಗೆ ಪೂರ್ವದಿಂದ ಪಶ್ಚಿಮಕ್ಕೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಹೊಸೂರು ರಸ್ತೆ ಸಿ.ಎಂ.ಪಿ. ಗೇಟ್‌ನಿಂದ ಬರ್ಲಿ ಸ್ಟ್ರೀಟ್ ಮತ್ತು ಲಾಂಗ್‌ಫೋರ್ಡ್ ರಸೆ ಜಂಕ್ಷನ್‌ವರೆಗೆ ಪೂರ್ವದಿಂದ ಪಶ್ಚಿಮಕ್ಕೆ ಸಾಗುವ ಸಂಚಾರವನ್ನು ನಿಷೇಧಿಸಲಾಗಿದೆ.

**2. ಬರ್ಲಿ ಸ್ಟ್ರೀಟ್:**

1. ಬರ್ಲಿ ಸ್ಟ್ರೀಟ್‌ನಲ್ಲಿ ಶಖೀಲ್ ಸ್ಟೋರ್ ಜಂಕ್ಷನ್‌ನಿಂದ ಹೊಸೂರು ಲಷ್ಕರ್ ರಸ್ತೆ ಜಂಕ್ಷನ್ ವರೆಗೆ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ಶಖೀಲ್ ಸ್ಟೋರ್ ಜಂಕ್ಷನ್‌ನಿಂದ ಹೊಸೂರು ಲಷ್ಕರ್ ರಸ್ತೆ ಜಂಕ್ಷನ್ ವರೆಗೆ ಪಶ್ಚಿಮದಿಂದ ಪೂರ್ವಕ್ಕೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಹೊಸೂರು ಲಷ್ಕರ್ ರಸ್ತೆ ಜಂಕ್ಷನ್‌ನಿಂದ ಶಖೀಲ್ ಸ್ಟೋರ್ ಜಂಕ್ಷನ್‌ವರೆಗೆ ಬರ್ಲಿ ಸ್ಟ್ರೀಟ್‌ನಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಸಾಗುವ ಸಂಚಾರವನ್ನು ನಿಷೇಧಿಸಲಾಗಿದೆ.
2. ಬರ್ಲಿ ಸ್ಟ್ರೀಟ್‌ನಲ್ಲಿ ಶಖೀಲ್ ಸ್ಟೋರ್ ಜಂಕ್ಷನ್‌ನಿಂದ ಬರ್ಲಿ ಸ್ಟ್ರೀಟ್ ಮತ್ತು ಲಾಂಗ್‌ಫೋರ್ಡ್ ರಸ್ತೆ ಜಂಕ್ಷನ್‌ವರೆಗೆ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ಶಖೀಲ್ ಸ್ಟೋರ್ ಜಂಕ್ಷನ್‌ನಿಂದ ಬರ್ಲಿ ಸ್ಟ್ರೀಟ್ ಮತ್ತು ಲಾಂಗ್‌ಫೋರ್ಡ್ ರಸ್ತೆ ಜಂಕ್ಷನ್‌ವರೆಗೆ ದಕ್ಷಿಣದಿಂದ ಉತ್ತರಕ್ಕೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಬರ್ಲಿ ಸ್ಟ್ರೀಟ್ ಮತ್ತು ಲಾಂಗ್‌ಫೋರ್ಡ್ ರಸ್ತೆ ಜಂಕ್ಷನ್‌ನಿಂದ ಶಖೀಲ್ ಸ್ಟೋರ್ ಜಂಕ್ಷನ್‌ವರೆಗೆ ಬರ್ಲಿ ಸ್ಟ್ರೀಟ್‌ನಲ್ಲಿ ಉತ್ತರದಿಂದ ದಕ್ಷಿಣಕ್ಕೆ ಸಾಗುವ ಸಂಚಾರವನ್ನು ನಿಷೇಧಿಸಲಾಗಿದೆ.
3. ಬರ್ಲಿ ಸ್ಟ್ರೀಟ್‌ನಲ್ಲಿ ಶಖೀಲ್ ಸ್ಟೋರ್ ಜಂಕ್ಷನ್‌ನಿಂದ ಲಾಂಗ್‌ಫೋರ್ಡ್ ರಸ್ತೆ ಮತ್ತು ಬರ್ಲಿ ಸ್ಟ್ರೀಟ್ ಜಂಕ್ಷನ್ ವರೆಗೆ ರಸ್ತೆಯ ಎರಡೂ ಬದಿಗಳಲ್ಲಿ ವಾಹನ ನಿಲುಗಡೆಯನ್ನು ನಿಷೇಧಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 01.09.2005 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 16.08.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಡಾ: ಅಜಯಕುಮಾರ ಸಿಂಹ**

ಪಿ.ಆರ್. 1157 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಪೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

### ಸಂಖ್ಯೆ: 15/ಸಂವಿ/ಸಿ.ಓ.ಪಿ/2005, ಬೆಂಗಳೂರು, ದಿನಾಂಕ: 16ನೇ ಆಗಸ್ಟ್ 2005

ಬೆಂಗಳೂರು ನಗರ ಶಿವಾಜಿನಗರ ಸಂಚಾರ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿನ ಜುಮ್ಮಾ ಮಸೀದಿ ರಸ್ತೆಯಿಂದ ಸೆಂಟ್ ಜಾನ್ಸ್ ರಸ್ತೆ ವರೆವಿಗೆ ಇರುವ ವೀರಪಿಳ್ಳೆ ಸ್ಟ್ರೀಟ್ ಸಾಕಷ್ಟು ಅಗಲವಿಲ್ಲದೆ ಇದ್ದು ಎರಡೂ ಕಡೆಗಳಲ್ಲಿ ವಾಣಿಜ್ಯ ಮಳಿಗೆಗಳನ್ನು ಹೊಂದಿ ದ್ವಿಮುಖ ಸಂಚಾರ ವ್ಯವಸ್ಥೆ ಇರುತ್ತದೆ. ಇತ್ತೀಚಿಗೆ ಈ ರಸ್ತೆಯಲ್ಲಿ ಸಂಚಾರ ದಟ್ಟಣೆ ಅಧಿಕಗೊಂಡು ಹಾಗೂ ವಾಣಿಜ್ಯ ಮಳಿಗೆಗಳಿಗೆ ಬರುವ ಗ್ರಾಹಕರು ಹಾಗೂ ಅವುಗಳ ಮಾಲೀಕರುಗಳು ತಮ್ಮ ವಾಹನಗಳನ್ನು ಅಡ್ಡಾದಿಡ್ಡಿಯಾಗಿ ನಿಲುಗಡೆ ಮಾಡುವುದರಿಂದ ಇತರೆ ವಾಹನಗಳ ಹಾಗೂ ಪಾದಚಾರಿಗಳ ಸುಗಮ ಸಂಚಾರಕ್ಕೆ ಅಡಚಣೆ ಉಂಟಾಗುತ್ತಿರುವುದಲ್ಲದೆ ಸಂಚಾರದಲ್ಲಿ ಸ್ಥಗಿತ ಹಾಗೂ ಅಪಘಾತಗಳಿಗೆ ಕಾರಣವಾಗುತ್ತಿದೆ. ಈ ರಸ್ತೆಯಲ್ಲಿ ಸಂಚಾರ ದಟ್ಟಣೆಯನ್ನು ವ್ಯವಸ್ಥಿತವಾಗಿ ನಿಯಂತ್ರಿಸಲು ಹಾಗೂ ಸಂಚಾರವು ಸರಾಗವಾಗಿ ಚಲಿಸಲು ಸಹಾಯಕವಾಗುವಂತೆ ಮತ್ತು ಸಾರ್ವಜನಿಕರ ಸಂಚಾರದ ಹಿತದೃಷ್ಟಿಯಿಂದ

ವೀರಪಿಳ್ಳೈ ಸ್ಟ್ರೀಟ್‌ನಲ್ಲಿ ಏಕಮುಖ ಸಂಚಾರ ವ್ಯವಸ್ಥೆ ಹಾಗೂ ಅದಲು ಬದಲು ದಿನಗಳಲ್ಲಿ ವಾಹನ ನಿಲುಗಡೆ ವ್ಯವಸ್ಥೆ ಜಾರಿಗೆ ತರುವುದು ಅವಶ್ಯಕವಾಗಿರುತ್ತೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಅಜಯಕುಮಾರ ಸಿಂಹ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧಗಳನ್ನು ಆದೇಶಿಸಿರುತ್ತೇನೆ.

1. ವೀರಪಿಳ್ಳೈ ಸ್ಟ್ರೀಟ್‌ನಲ್ಲಿ ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ಸೆಂಟ್‌ಜಾನ್ಸ್ ರಸ್ತೆ ಜಂಕ್ಷನ್‌ನಿಂದ ಜುಮ್ಮಾ ಮಸೀದಿ ರಸ್ತೆ ಜಂಕ್ಷನ್ (ಓ.ಪಿ.ಹೆಚ್. ರಸ್ತೆ) ವರೆಗೆ ಪೂರ್ವದಿಂದ ಪಶ್ಚಿಮಕ್ಕೆ ಇರುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ಜುಮ್ಮಾ ಮಸೀದಿ ರಸ್ತೆಯಿಂದ ಸೆಂಟ್ ಜಾನ್ಸ್ ರಸ್ತೆ ಜಂಕ್ಷನ್ ವರೆಗೆ ಪಶ್ಚಿಮದಿಂದ ಪೂರ್ವಕ್ಕೆ ಸಾಗುವ ಸಂಚಾರವನ್ನು ನಿಷೇಧಿಸಲಾಗಿದೆ.

2. ವೀರಪಿಳ್ಳೈ ಸ್ಟ್ರೀಟ್‌ನಲ್ಲಿ ಅದಲು ಬದಲು ದಿನಗಳಲ್ಲಿ ಅಂದರೆ ಬೆಸ ಸಂಖ್ಯೆಯ ದಿನಾಂಕಗಳಂದು ರಸ್ತೆಯ ಉತ್ತರಕ್ಕೆ ಹಾಗೂ ಸರಿ ಸಂಖ್ಯೆಯ ದಿನಾಂಕಗಳಂದು (alternate days) ರಸ್ತೆಯ ದಕ್ಷಿಣಕ್ಕೆ ವಾಹನಗಳ ನಿಲುಗಡೆ ಮಾಡಲು ಆದೇಶಿಸಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 27.08.2005 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 16.08.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಡಾ: ಅಜಯಕುಮಾರ ಸಿಂಹ**

ಪಿ.ಆರ್. 1158 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

**ಸಂಖ್ಯೆ: 14/ಸಂವಿ/ಸಿ.ಓ.ಪಿ/2005, ಬೆಂಗಳೂರು, ದಿನಾಂಕ: 16ನೇ ಆಗಸ್ಟ್ 2005**

ಬೆಂಗಳೂರು ನಗರ ಹೈಗ್ರೌಂಡ್ ಸಂಚಾರ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿನ ವಸಂತನಗರ ಲೂಪ್ ರಸ್ತೆಯು ವಸಂತನಗರ ಮೌಂಟ್ ಕಾರ್ಮೆಲ್ ಕಾಲೇಜ್ ಜಂಕ್ಷನ್ ಬಳಿ 8ನೇ ಮುಖ್ಯ ರಸ್ತೆಯಿಂದ ಪ್ರಾರಂಭವಾಗಿ, ಬಾಗು ರಸ್ತೆಯಾಗಿದ್ದು ಮತ್ತೊಂದು ಕಡೆ ವಸಂತನಗರ 1ನೇ ಮುಖ್ಯ ರಸ್ತೆಯಲ್ಲಿ 5ನೇ ಕ್ರಾಸ್ ರಸ್ತೆ ಸಂಧಿಸುವ ಜಾಗದಲ್ಲಿ ಸಂಪರ್ಕ ಕಲ್ಪಿಸುವ ರಸ್ತೆಯಾಗಿರುತ್ತೆ. ಈ ರಸ್ತೆಯು 18 ರಿಂದ 20 ಅಡಿ ಅಗಲವಿದ್ದು ದ್ವಿಮುಖ ಸಂಚಾರ ವ್ಯವಸ್ಥೆ ಇರುತ್ತೆ. ಈ ರಸ್ತೆಯಲ್ಲಿ ಇತ್ತೀಚಿಗೆ ವಾಣಿಜ್ಯ ಸಂಕೀರ್ಣಗಳು, ನಿವಾಸಿಯ ಮನೆಗಳು, ಬಹುಬಹಡಿ ಕಟ್ಟಡಗಳು ತಲೆ ಎತ್ತಿದ್ದು ಸಹಜವಾಗಿಯೆ ವಾಹನ ಸಂಚಾರ ಒತ್ತಡ ಅಧಿಕಗೊಂಡಿರುತ್ತೆ. ಅಗಲವಿಲ್ಲದ ಈ ರಸ್ತೆಯಲ್ಲಿ ವಾಹನಗಳನ್ನು ನಿಲುಗಡೆಗೊಳಿಸುತ್ತಿರುವುದರಿಂದ ಸುಗಮ ಸಂಚಾರಕ್ಕೆ ತೊಂದರೆಯಾಗುತ್ತಿರುವ ಜೊತೆಗೆ ಸಂಚಾರ ಸ್ಥಗಿತಗೊಳ್ಳುವುದಲ್ಲದೆ ರಸ್ತೆ ಅಪಘಾತಗಳಿಗೂ ಸಹ ಕಾರಣವಾಗಿರುತ್ತೆ. ಈ ರಸ್ತೆಯಲ್ಲಿ ಸಂಚಾರ ದಟ್ಟಣೆಯನ್ನು ವ್ಯವಸ್ಥಿತವಾಗಿ ನಿಯಂತ್ರಿಸಲು ಹಾಗೂ ಸಂಚಾರವು ಸರಾಗವಾಗಿ ಚಲಿಸಲು ಸಹಾಯಕವಾಗುವಂತೆ ಮತ್ತು ಸಾರ್ವಜನಿಕರ ಸಂಚಾರದ ಹಿತದೃಷ್ಟಿಯಿಂದ ಲೂಪ್ ರಸ್ತೆಯ ಎರಡೂ ಬದಿಯಲ್ಲಿ ವಾಹನ ನಿಲುಗಡೆ ನಿಷೇಧವನ್ನು ಜಾರಿಗೆ ತರುವುದು ಅವಶ್ಯಕವಾಗಿರುತ್ತೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಅಜಯಕುಮಾರ ಸಿಂಹ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧಗಳನ್ನು ಆದೇಶಿಸಿರುತ್ತೇನೆ.

"ವಸಂತನಗರ ಮೌಂಟ್ ಕಾರ್ಮೆಲ್ ಕಾಲೇಜ್ ಜಂಕ್ಷನ್ ಬಳಿ 8ನೇ ಮುಖ್ಯ ರಸ್ತೆಯಿಂದ ಪ್ರಾರಂಭವಾಗಿ ವಸಂತನಗರ 1ನೇ ಮುಖ್ಯ ರಸ್ತೆಯಲ್ಲಿ 5ನೇ ಕ್ರಾಸ್ ರಸ್ತೆ ಸಂಧಿಸುವವರೆಗೆ ಲೂಪ್ ರಸ್ತೆಯಲ್ಲಿ ರಸ್ತೆಯ ಎರಡೂ ಬದಿಗಳಲ್ಲಿ ಎಲ್ಲಾ ತರಹದ ವಾಹನ ನಿಲುಗಡೆಯನ್ನು ನಿಷೇಧಿಸಿದೆ".

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 18.08.2005 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 16.08.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಡಾ: ಅಜಯಕುಮಾರ ಸಿಂಹ**

ಪಿ.ಆರ್. 1159 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ಆರ್ಥಿಕ ಇಲಾಖೆ

## ಅಧಿಕೃತ ಜ್ಞಾಪನ

**ಸಂಖ್ಯೆ: ಆಇ 78 ಸಉಲಾ 2005, ಬೆಂಗಳೂರು ದಿನಾಂಕ: 21ನೇ ಜುಲೈ 2005**

**ವಿಷಯ :** ದಿನಾಂಕ: 01.01.2005 ರಲ್ಲಿದ್ದಂತೆ ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯಲ್ಲಿನ ಉಪ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ ಪ್ರಚುರಪಡಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಆಇ 106 ಸಉಲಾ 2004, ದಿನಾಂಕ: 25.06.2004.

ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯಲ್ಲಿನ ಉಪ ನಿರ್ದೇಶಕರ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01.01.2005 ರಲ್ಲಿದ್ದಂತೆ ಈ ಕೆಳಕಂಡಂತೆ ಪ್ರಕಟಿಸಲಾಗಿದೆ:

| ಕ್ರ. ಸಂ. | ಅಧಿಕಾರಿಯ ಹೆಸರು ಶ್ರೀ:ಶ್ರೀಮತಿ | ಜನ್ಮ ದಿನಾಂಕ | ಸರ್ಕಾರದ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 1 | ಕೆ.ಎನ್. ರಾಮಸ್ವಾಮಿ | 24.07.1947 | 08.09.1975 | 20.11.1989 | 20.11.1989 |
| 2 | ಆರ್. ಬಸವಣ್ಣ | 10.12.1949 | 01.06.1977 | 06.07.1995 | 04.07.1995 |
| 3 | ಓ. ಬೊಮ್ಮಣ್ಣ | 08.11.1953 | 01.10.1981 | 11.08.1995 | 04.07.1995 |
| 4 | ಎಸ್.ಎನ್. ಪಟವಾರಿ | 16.02.1947 | 10.11.1975 | 02.08.2001 | 02.08.2001 |
| 5 | ಬಿ. ದೊಡ್ಡ ನರಸಯ್ಯ | 02.03.1948 | 21.07.1976 | 06.08.2001 | 02.08.2001 |

ಈ ಜೇಷ್ಠತಾ ಪಟ್ಟಿಯ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದರೆ ಅಂತಹ ಅಧಿಕಾರಿಗಳು ಈ ಅಧಿಕೃತ ಜ್ಞಾಪನ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆಗಳನ್ನು ಇಲಾಖಾ ನಿರ್ದೇಶಕರ ಮುಖಾಂತರ ಸರ್ಕಾರಕ್ಕೆ ಕಳುಹಿಸಿ ಕೊಡತಕ್ಕದ್ದು. ಈ ಅವಧಿಯೊಳಗೆ ಯಾವುದೇ ಆಕ್ಷೇಪಣೆಗಳು ಬಾರದಿದ್ದಲ್ಲಿ ಈ ಜೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಿ ಪ್ರಕಟಿಸಲು ಕ್ರಮ ತೆಗೆದುಕೊಳ್ಳಲಾಗುವುದು.

**ಎನ್. ಪ್ರಭಾಕರ್**

ಪಿ.ಆರ್.1078

ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

**GOVERNMENT OF KARNATAKA**
**DEPARTMENT OF CO-OPERATION**
**Office of the Assistant Registrar of Co-Operative Societies, I Circle, Margosa Road, Malleswaram, Bangalore-560 003**

**No. ARB/44/Sale Confirmation/1/2005-06, Dated: 1st July 2005**

**Sub:** Confirmation of Sale in CEP No.2893/04-05, Decree No.DRBI/DIS/1105/04-05, dated: 28.9.2004, relates to Sri Kengal Credit Co-Operative Society Limited, Bangalore-reg.

**Ref:** Letter No.SO/SKCS/CEP-2893/04-05, dated: 14.6.2005 from Sale Officer, attached to Sri Kengal Credit Co-Operative Society Limited, Bangalore-560 086.

**PREAMBLE:**

The Sale Officer, Sri Kengal Credit Co-Operative Society Limited, No.273, 2nd Main Road, West of Chord Road, Bangalore-86, has conducted the sale in CEP No.2893/04-05 and decree No.DRBI/DIS/1105/04-05, dated: 28.9.2004, and sold the under mentioned Immovable property of Sri S.D. Erappa S/o. Doddaveeraiah due to the loan outstanding to the Sri Kengal Credit Co-Operative Society Limited, No.273, 2nd Main Road, West of Chord Road, Bangalore-86, and the said Immovable property knocked down in public auction held on 24.4.2005 in favour of Smt. S.E. Chandrika W/o B.M. Chandrashekar, residing at No.2/84, 8th Main Road, III Block, West, RBI Colony, Bangalore-560 011, for Rs.22,75,000/- (Rupees Twenty Two Lakhs Seventy Five Thousand only) as there are no other highest bidder as per the report of the Sale Officer, working in Sri Kengal Credit Co-Operative Society Limited No.273, 2nd Main Road, West of Chord Road, Bangalore-560 086. Hence the following orders.

**PROPERTY SCHEDULE**

| Town | Site No. | Extent | Assessment | Kind of Land |
|---|---|---|---|---|
| 3rd Cross, Vidyaranyanagara, Magadi Road, Bangalore-23. | No.87 | 37'X31' | Value of the property worth Rs.20,40,200/- | House |

**ORDERS**

The said Immovable property of Sri. S.D. Erappa S/o Doddaveeraiah, No.87, 3rd Cross, Vidyaranyanagar, Bangalore-23. Which is mortgaged to the Sri Kengal Credit Co-Operative Society Limited, No.273, 2nd Main Road, West of Chord Road, Bangalore-560 086 for having taken loan from the said Society and default in payment, the property have been sold at public auction on 24.4.2005 in CEP No.2893/04-05 and decree No.DRBI/DIS/1105/04-05 and knocked down in favour of Smt. S.E. Chandrika W/o B.M. Chandrashekar, No.2/84, 8th Main Road, III Block West, RBI Colony, Bangalore-560 011, for Rs.22,75,000/- (Rupees Twenty Two Lakhs Seventy Five Thousand only).

Hence the sale conducted on 24.4.2005 is confirmed in favour of Smt. S.E. Chandrika W/o B.M. Chandrashekar, No.2/84, 8th Main Road, III Block West, RBI Colony, Bangalore-560011. Who is the highest bidder as per Rule 38 of KCS Rules 1960.

Given under my hand seal on this day of 1st July 2005.

**H. BALASHEKAR**

P.R. 1077

Assistant Registrar of Co-Operative Societies, I Circle,
Margosa Road, Malleswaram, Bangalore-560 003.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ-ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**ವಿಷಯ :** ಸಮಾಪನಾ ಆದೇಶಿತ ಜೋಗ್ ಪ್ರಾಜೆಕ್ಟ್ ಕೋ-ಆಪರೇಟಿವ್ ಸ್ಟೋರ್ಸ್ ನಿ., ಜೋಗ್ ಸಾಗರ ತಾಲ್ಲೂಕು ಇದರ ಪುನಃಶ್ಚೇತನ ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದೇಶ ಸಂಖ್ಯೆ: ಡಿಆರ್‌ಎಸ್:ಸಮಾಪನೆ: ಡಿಎಲ್‌ಎಸ್:35:2004-05:ದಿನಾಂಕ: 13.8.2004.

2) ಸ.ಸಂ.ಸಹಾಯಕ ನಿಬಂಧಕರು, ಸಾಗರ ಇವರ ಪತ್ರ ಸಂಖ್ಯೆ: ಎಆರ್-25:ಸಮಾಪನೆ:1260:2004-05 ದಿ: 2.7.2005.

**ಪ್ರಸ್ತಾವನೆ:**

ಜೋಗ್ ಪ್ರಾಜೆಕ್ಟ್ ಕೋ-ಆಪರೇಟಿವ್ ಸ್ಟೋರ್ಸ್ ಲಿ., ಜೋಗ್, ಸಾಗರ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಇವರ ಕಾರ್ಯಾಲಯದ ಸಂಖ್ಯೆ: ಎಆರ್-25:425:41-42, ದಿನಾಂಕ: 29.6.1942 ರಲ್ಲಿ ನೋಂದಣಿಯಾಗಿದ್ದು ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇದ್ದು, ಬೈಲಾದಲ್ಲಿಯ ಉದ್ದೇಶಗಳಂತೆ ಕಾರ್ಯಾಚರಣೆಯನ್ನು ನಡೆಸದೆ ನಿಷ್ಕ್ರೀಯಗೊಂಡಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಹಕಾರ ಕಾಯ್ದೆ ಕಲಂ 72 ರನ್ವಯ ಸಮಾಪನೆಗೊಳಿಸಿ ಮಾರಾಟಾಧಿಕಾರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಸಾಗರ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕಗೊಳಿಸಲಾಗಿದೆ. ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಇವರು ಈ ಸಂಘದ ಕೆಲವು ಆಸಕ್ತ ಸದಸ್ಯರು ಕಾರ್ಯಚಟುವಟಿಕೆಯನ್ನು ಪುನಃ ಪ್ರಾರಂಭಿಸಲು ಉತ್ಸಕರಾಗಿದ್ದು, ದಿನಾಂಕ: 29.6.2005 ರಲ್ಲಿ ಸಭೆ ಸೇರಿ ಸಂಘವನ್ನು ಪುನಃಶ್ಚೇತನಗೊಳಿಸಿ ಕೊಡಲು ಕೋರಿರುವುದಾಗಿ ತಿಳಿಸಿರುತ್ತಾರೆ. ಈ ಸಂಘವು ಹಿಟ್ಟಿನ ಗಿರಿಣಿ ಹಾಗೂ ಔಷಧಿ ಅಂಗಡಿಗಳನ್ನು ಹೊಂದಿದ್ದು ಸಾರ್ವಜನಿಕರಿಗೆ ಹಾಗೂ ಸದಸ್ಯರಿಗೆ ಈ ವ್ಯವಹಾರದಿಂದ ಅನುಕೂಲವಿದ್ದು ಈ ಸಂಘದ ನೋಂದಣಿ ರದ್ದು ಮಾಡಿದಲ್ಲಿ ಸದಸ್ಯರಿಗೆ ತುಂಬಾ ಅನಾನುಕೂಲವಾಗುತ್ತದೆಯೆಂದು ತಿಳಿಸಿ ಪುನಃಶ್ಚೇತನಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸಮಾಪನಾಧಿಕಾರಿಯವರು ಈ ಸಂಘದ ಪ್ರಭಾರವನ್ನು ವಹಿಸಿಕೊಳ್ಳಲು ಸಾಧ್ಯವಾಗದ ಪ್ರಯುಕ್ತ ಸದಸ್ಯರ ಕೋರಿಕೆಯಂತೆ ಶಿಫಾರಸ್ಸು ಮಾಡಲು ತೀರ್ಮಾನಿಸಿ ಕೋರಿ ಕೊಂಡಿರುತ್ತಾರೆ. ಈ ಸಂಘದ ಸದಸ್ಯರ ಹಿತದೃಷ್ಟಿಯಿಂದ ಅವರ ಅನುಕೂಲದ ದೃಷ್ಟಿಯಿಂದ ಮತ್ತು ಸಾಗರ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಶಿಫಾರಸ್ಸು ಆಧಾರದ ಮೇಲೆ ಈ ಕೆಳಕಂಡಂತೆ ಆದೇಶಿಸಿದೆ.

**ಸಂಖ್ಯೆ: ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:35:2004-05/675, ದಿನಾಂಕ: 23ನೇ ಜುಲೈ 2005**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರು, ಡಿ.ಸಿ. ದೇವರಾಜ್, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(4) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001 ರಲ್ಲಿ ದತ್ತವಾದ ಅಧಿಕಾರದನ್ವಯ ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳಿಗಾಗಿ ಜೋಗ್ ಪ್ರಾಜೆಕ್ಟ್ ಕೋ-ಆಪರೇಟೀವ್ ಸ್ಟೋರ್ಸ್ ಲಿ., ಜೋಗ್, ಸಾಗರ ತಾಲ್ಲೂಕು ಈ ಸಂಘದ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಕೆಳಕಂಡ ಷರತ್ತಿನೊಂದಿಗೆ ಪುನಃಶ್ಚೇತನಗೊಳಿಸಿರುತ್ತೇನೆ.

1) ಸಂಘದ ಲೆಕ್ಕಪತ್ರಗಳನ್ನು ತಹಲ್ ಸಾಲಿನವರೆಗೆ ಕೂಡಲೇ ಲೆಕ್ಕಪರಿಶೋಧನೆಗೆ ಒದಗಿಸತಕ್ಕದ್ದು.

2) ಸದಸ್ಯತ್ವವನ್ನು ಹೆಚ್ಚಿಸಿ ಬಂಡವಾಳ ಅಭಿವೃದ್ಧಿ ಪಡಿಸತಕ್ಕದ್ದು.

3) ಸದಸ್ಯರಿಂದ ಶೇವಣಿ ಸಂಗ್ರಹಿಸಿ ದುಡಿಯುವ ಬಂಡವಾಳದಿಂದ ವ್ಯವಹಾರವನ್ನು ಹೆಚ್ಚಿಸಲು ಕಾರ್ಯ ರೂಪಿಸಿಕೊಳ್ಳತಕ್ಕದ್ದು.

ಸಮಾಪನಾಧಿಕಾರಿಯವರು 30 ದಿನದೊಳಗಾಗಿ ಈ ಸಂಘದ ಆಡಳಿತ ಮಂಡಳಿಯನ್ನು ರಚಿಸಲು ಕಾಯ್ದೆಯನುಸಾರ ಕ್ರಮಕೈಗೊಂಡು ವರದಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 23.7.2005 ರಂದು ನನ್ನ ಸ್ವಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಪಿ.ಆರ್. 1080 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ.

## ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳ ಕಛೇರಿ, ತುಮಕೂರು

### ಪ್ರಕಟಣೆ

**ಸಂಖ್ಯೆ: ಬಿಸಿಎಂ-2:ಕಾತ:ಸಿಆರ್-30:2005-06, ದಿನಾಂಕ: 25ನೇ ಜುಲೈ 2005**

**ವಿಷಯ :** 2005-06ನೇ ಸಾಲಿನ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

ತುಮಕೂರು ಜಿಲ್ಲೆಯ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ 2005-06ನೇ ಸಾಲಿನಲ್ಲಿ ವಕೀಲ ವೃತ್ತಿಯಲ್ಲಿ ತರಬೇತಿ ನೀಡಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಹಿಂದುಳಿದ ವರ್ಗಗಳಿಗೆ ಸೇರಿದ ಕಾನೂನು ಪದವೀಧರರು ಈ ಕೆಳಕಂಡ ನಿಬಂಧನೆಗೆ ಒಳಪಟ್ಟು ಅರ್ಜಿ ಸಲ್ಲಿಸಬಹುದು. ಅರ್ಜಿಯನ್ನು ತುಮಕೂರು ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಅಧಿಕಾರಿಯವರ ಕಛೇರಿಯಿಂದ ಕಛೇರಿ ವೇಳೆಯಲ್ಲಿ ಪಡೆಯಬಹುದು. ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 25.8.2005.

**ನಿಬಂಧನೆಗಳು:**

1. ಎಲ್‌ಎಲ್‌ಬಿ ಪರೀಕ್ಷೆಯನ್ನು ಪಾಸು ಮಾಡಿದ ಹಿಂದುಳಿದ ವರ್ಗಗಳ ಅಭ್ಯರ್ಥಿಯಾಗಿರಬೇಕು. ವಕೀಲ ವೃತ್ತಿ ಅಭ್ಯಾಸಕ್ಕೆ (ಪ್ರಾಕ್ಟೀಸ್) ನಿಗದಿಪಡಿಸಿರುವ ಅರ್ಹತೆ ಹೊಂದಿದ್ದು ಕಾನೂನು ಪರೀಕ್ಷೆಯನ್ನು ಪಾಸು ಮಾಡಿರುವುದು. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಎರಡು ವರ್ಷದ ಅವಧಿಯೊಳಗಿರಬೇಕು. ಇಂತಹ ಅಭ್ಯರ್ಥಿಗಳು ಮಾತ್ರ ತರಬೇತಿಗೆ ಅರ್ಜಿ ಸಲ್ಲಿಸಲು ಅರ್ಹತೆ ಹೊಂದಿರುತ್ತಾರೆ.
2. ಸರ್ಕಾರಿ ಆದೇಶ ಸಂಖ್ಯೆ: ಸಕಇ 225 ಬಿಸಿಎ 2000 ದಿನಾಂಕ: 30.2.2002 ರಲ್ಲಿ ವರ್ಗೀಕರಣ ಮಾಡಿರುವ ಪ್ರಕಾರ ವರ್ಗ 1, 2ಎ, 3ಎ, 3ಬಿಗೆ ಸೇರಿದ ಅಭ್ಯರ್ಥಿಗಳಾಗಿರಬೇಕು. ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಕಇ 222 ಬಿಸಿಎ 84, ದಿನಾಂಕ: 20.9.94ರ ಆದೇಶದಲ್ಲಿ ಸರ್ಕಾರವು ನಿಗದಿಪಡಿಸಿರುವ ನಮೂನೆಗಳಲ್ಲಿ ಜಾತಿ ಪ್ರಮಾಣಪತ್ರವನ್ನು ಸಲ್ಲಿಸಬೇಕು. ವರ್ಗ 1ರ ಅಭ್ಯರ್ಥಿಗಳನ್ನು ಹೊರತುಪಡಿಸಿ ಇತರೆ ಹಿಂದುಳಿದ ವರ್ಗಗಳ ಅಭ್ಯರ್ಥಿಗಳ ವಾರ್ಷಿಕ ಆದಾಯ ಎಲ್ಲಾ ಮೂಲಗಳಿಂದ ರೂ.15000 ಮೀರಿರಬಾರದು.

3. ತರಬೇತಿಗೆ ಆಯ್ಕೆ ಮಾಡುವ ಅಭ್ಯರ್ಥಿಗಳ ಸಂಖ್ಯೆ ಆಗಾಗ್ಗೆ ಸರ್ಕಾರದಿಂದ ನಿಗದಿಪಡಿಸಿದಂತೆ ಮಾರ್ಪಾಡಾಗುತ್ತದೆ.
4. ತರಬೇತಿಯ ಅವಧಿ 4 ವರ್ಷಗಳಾಗಿದ್ದು ತರಬೇತಿಯ ಅವಧಿಯಲ್ಲಿ ತರಬೇತಿದಾರರಿಗೆ ರೂ.1000 ಮಾಸಿಕ ಶಿಷ್ಯವೇತನವನ್ನು ನೀಡಲಾಗುತ್ತದೆ.
5. ಈ ಸೌಲಭ್ಯ ಪಡೆಯಲಿಚ್ಛಿಸುವ ಅಭ್ಯರ್ಥಿಗಳ ವಯೋಮಿತಿ 30 ವರ್ಷಕ್ಕೆ ಮೀರಿರಬಾರದು. ವರ್ಗ 1 ಅಭ್ಯರ್ಥಿಗಳಿಗೆ ವಯೋಮಿತಿ 31 ವರ್ಷ ಮೀರಿರಬಾರದು.
6. ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ತಮ್ಮ ಹೆಸರನ್ನು ನೋಂದಾಯಿಸಿರಬೇಕು.
7. ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಜಾರಿ ಆದಾಯ ಪ್ರಮಾಣಪತ್ರ ನೀಡಿ ಆಯ್ಕೆಯಾಗಿರುವುದು ಕಂಡು ಬಂದಲ್ಲಿ ಶಿಕ್ಷೆಗೆ ಗುರಿಪಡಿಸಿ ಸ್ಟೈಫಂಡ್ ನೀಡಿರುವ ಒಟ್ಟು ಹಣದ ಜೊತೆಗೆ ಶೇ.10 ಬಡ್ಡಿ ಸೇರಿಸಿ ಭೂಕಂದಾಯ ಬಾಕಿ ರೂಪದಲ್ಲಿ ವಸೂಲಿ ಮಾಡಲಾಗುವುದು.
8. ಸದಸ್ಯ ಕಾರ್ಯದರ್ಶಿಯವರು ಸ್ವೀಕರಿಸಿದ ಅರ್ಜಿಗಳನ್ನು ಪರಿಶೀಲನೆ ಮಾಡಿ ಅಪೂರ್ಣ ಹೊಂದಿರುವ ಹಾಗೂ ಕೇಳಿರುವ ಮಾಹಿತಿಯನ್ನು ಅರ್ಜಿಯ ಸಂಗಡ ಒದಗಿಸದ ಮತ್ತು ಅವಧಿ ಮೀರಿದಂತಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸಲಾಗುವುದು.

ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ತುಮಕೂರು.

## ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳ ಕಛೇರಿ, ತುಮಕೂರು

### ಪ್ರಕಟಣೆ

**ಸಂಖ್ಯೆ: ಬಿಸಿಎಂ-2:ಮಅ:ಕಾತ:ಸಿಆರ್-28:2005-06, ದಿನಾಂಕ: 25ನೇ ಜುಲೈ 2005**

**ವಿಷಯ :** 2005-06ನೇ ಸಾಲಿಗೆ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

ತುಮಕೂರು ಜಿಲ್ಲೆಯ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ 2005-06ನೇ ಸಾಲಿನಲ್ಲಿ ವಕೀಲ ವೃತ್ತಿಯಲ್ಲಿ ತರಬೇತಿ ನೀಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಅರ್ಜಿ ಸಲ್ಲಿಸಬಹುದು. ಅರ್ಜಿಯನ್ನು ತುಮಕೂರು ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಕಛೇರಿಯಲ್ಲಿ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು. ಅವಶ್ಯಕ ದಾಖಲಾತಿಗಳೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 25.8.2005.

**ನಿಬಂಧನೆಗಳು:**

1. ಕಾನೂನು ಪದವಿ ಪರೀಕ್ಷೆ ಪಾಸು ಮಾಡಿದ ಮತೀಯ ಅಲ್ಪಸಂಖ್ಯಾತರ ಅಭ್ಯರ್ಥಿಯಾಗಿರಬೇಕು (ಮುಸ್ಲಿಂ, ಕ್ರಿಶ್ಚಿಯನ್, ಬೌದ್ಧರು, ಜೈನರು, ಪಾರ್ಸಿ, ಸಿಖ್) ವಕೀಲ ವೃತ್ತಿ ಅಭ್ಯಾಸಕ್ಕೆ ನಿಗದಿಪಡಿಸಿದ ವಿದ್ಯಾರ್ಹತೆ ಹೊಂದಿರಬೇಕು.
2. ಕಾನೂನು ಪದವಿಯ ಪರೀಕ್ಷೆಯನ್ನು ಪಾಸು ಮಾಡಿರುವುದು ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸುವ ಕೊನೆಯ ದಿನಾಂಕಕ್ಕೆ ಎರಡು ವರ್ಷಗಳ ಅವಧಿಯೊಳಗಿರಬೇಕು.
3. ಸರ್ಕಾರ ನಿಗದಿಪಡಿಸಿರುವ ನಮೂನೆಯಲ್ಲಿ ಜಾತಿ ಆದಾಯ ದೃಢೀಕರಣ ಪತ್ರ ಸಲ್ಲಿಸಬೇಕು. ವಾರ್ಷಿಕ ಆದಾಯದ ಮಿತಿ ಎಲ್ಲಾ ಮೂಲಗಳಿಂದ ರೂ.15000 ಗಳನ್ನು ಮೀರಬಾರದು. ಪ್ರವರ್ಗ 1 ರಡಿಯಲ್ಲಿ ಬರುವ ಮತೀಯ ಅಲ್ಪಸಂಖ್ಯಾತರಿಗೆ ಆದಾಯದ ಮಿತಿ ಇರುವುದಿಲ್ಲ.
4. ತರಬೇತಿ ಅವದಿ 4 ವರ್ಷಗಳಾಗಿದ್ದು ಮಾಹೆಯಾನ ರೂ.1000 ರಂತೆ ತರಬೇತಿ ಭತ್ಯೆ ನೀಡಲಾಗುವುದು.
5. ಈ ಸೌಲಭ್ಯ ಪಡೆಯಲಿಚ್ಛಿಸುವ ಅಭ್ಯರ್ಥಿಯ ವಯೋಮಿತಿ 30 ವರ್ಷ ಮೀರಿರಬಾರದು.
6. ಈ ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೋಂದಾಯಿಸಿರಬೇಕು.

ಅವಶ್ಯಕ ದಾಖಲಾತಿಗಳೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಛೇರಿ, ತುಮಕೂರು ರವರಿಗೆ, ಸಲ್ಲಿಸತಕ್ಕದ್ದು. ಕೊನೆಯ ದಿನಾಂಕ: ಮೀರಿದ ನಂತರ ಬಂದ ಹಾಗೂ ಅಪೂರ್ಣವಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಜಿಲ್ಲಾ ಅಧಿಕಾರಿಗಳು,
ಪಿ.ಆರ್. 1081 ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ತುಮಕೂರು.

## UNIVERSITY OF AGRICULTURAL SCIENCES, BANGALORE

### Administrative Office Recruitment Section [S.P.] GKVK, Bangalore-560 065

### NOTIFICATION

**No. AO/RSP/72 Cadres-Promotion/05-06, Dated: 18th July 2005**

Amendment to the Cadre and Recruitment Regulations of the Service Personnel of the University of Agricultural Sciences, Bangalore.

In exercise of the powers conferred under Statute 32 of UAS Statutes 1963, the Board of Regents of the University of Agricultural Sciences, Bangalore is, pleased to amend the Cadre and Recruitment Regulations of Service Personnel vide decision taken in 310th meeting held on 7th May 2005 as here under.

These amended Regulations shall come into force from the date of publication in the Karnataka Gazette.

**Add the following after General-5.**

**General Rule-6: Promotional Opportunity to the Non Promotional Cadres**

a. The Service Personnel who do not have any opportunity for promotion even once in their service period at the end of 22nd year of service, except for special grants extended by the Government

at the end of 10, 15, and 20 years of service are eligible for promotion in the following pay scales with new designation which will be with prefix **"Senior"** of the post held.

| Sl.No. | Present Pay Scale | Pay Scale granted after 22nd years of Service |
|---|---|---|
| 1. | 2600-4350 | 3300-6300 |
| 2. | 3000-5450 | 4150-7800 |
| 3. | 3300-6300 | 4575-8400 |
| 4. | 3850-7050 | 5200-9580 |
| 5. | 4150-7800 | 5200-9580 |
| 6. | 4575-8400 | 6000-11200 |
| 7. | 5200-9580 | 6000-11200 |
| 8. | 5575-10620 | 7400-13120 |

b. The above Sub-rule-(a) is applicable to those Service Personnel who have 15 years or less than 15 years of service only.

c. ಮುಂಬಡ್ತಿ ಪಡೆಯುವ ನೌಕರರು ಅವರ ಸೇವೆಯ ಹಿರಿತನದ ಆಧಾರದ ಮೇಲೆ, ವೃಂದ ಮತ್ತು ನೇಮಕಾತಿ ನಿಯಮಾವಳಿಗಳ, ನಿಯಮ-5 [Eligibility and Method of Selection For Promotion] ರಲ್ಲಿ ಹೇಳಿರುವ ವಿಧಾನದಲ್ಲಿ ಪರಿಗಣಿಸತಕ್ಕದ್ದು. ಮುಂಬಡ್ತಿ ಪಡೆಯುವ ನೌಕರರು ಉತ್ತಮ ಸೇವೆಯೊಂದಿಗೆ ಅವರ ಹಿಂದಿನ ಹುದ್ದೆಯ ಕೆಲಸಗಳ ಜೊತೆಯಲ್ಲಿ ಹೆಚ್ಚಿನ ಜವಾಬ್ದಾರಿಯನ್ನು ವಹಿಸಿಕೊಂಡು ಕಾರ್ಯನಿರ್ವಹಿಸತಕ್ಕದ್ದು. ಈ ಮುಂಬಡ್ತಿಯು ಮೇಲಿನ ಉಪ ನಿಯಮ (a) ಮತ್ತು (b) ರಲ್ಲಿ ಹೇಳಿರುವಂತೆ, ಅರ್ಹತೆ ಹೊಂದಿರುವ ಎಲ್ಲಾ ವೃಂದ ನೌಕರರಿಗೂ ಶೇಕಡ 100 ರಷ್ಟು ಮುಂಬಡ್ತಿ ನೀಡತಕ್ಕದ್ದು. ಈ ಮುಂಬಡ್ತಿಗಳು ಕೇವಲ ವೈಯಕ್ತಿಕವಾಗಿದ್ದು ಮುಂಬಡ್ತಿ ಪಡೆದ ನೌಕರರಿಂದ ವೃಂದದ ಹುದ್ದೆಗಳು ನಿವೃತ್ತಿಯಿಂದ / ಮರಣದಿಂದ ಖಾಲಿಯಾದ ನಂತರ ಕೂಡಲೇ ಈ ವೃಂದದ ಹುದ್ದೆಗಳು ಮೂಲ ವೃಂದದ ಹುದ್ದೆಯ ವೇತನ ಶ್ರೇಣಿಗೆ ಬರತಕ್ಕದ್ದು.

d. ಯಾವುದೇ ಮುಂಬಡ್ತಿ ಇಲ್ಲದ ವೃಂದಗಳಿಗೆ ಚಾಲ್ತಿಯಲ್ಲಿ ಇರುವ ವೃಂದ ಮತ್ತು ನೇಮಕಾತಿಯಲ್ಲಿನ ಕಾಲಂ-6 [Qualifications] ರಲ್ಲಿ ಹೇಳಿರುವ ವಿದ್ಯಾರ್ಹತೆ ಜೊತೆಗೆ ಈ ಕೆಳಗೆ ಹೇಳಿರುವ ಅರ್ಹತೆಯನ್ನು ಸೇರಿಸಿಕೊಳ್ಳತಕ್ಕದ್ದು.

**"22 years experience with satisfactory performance throughout his/her service"**

P.D. 63 Administrative Officer, UAS, GKVK, Bangalore.

## ನಗರಾಭಿವೃದ್ಧಿ ಇಲಾಖೆ
## ಅಧಿಸೂಚನೆ

**ಸಂಖ್ಯೆ: ನಅಇ 367 ಮೈಅಪ್ರಾ 2005, ಬೆಂಗಳೂರು, ದಿನಾಂಕ: 29ನೇ ಜುಲೈ 2005**

ಚಾಮರಾಜನಗರ ಜಿಲ್ಲೆಯ ಚಾಮರಾಜನಗರ-ರಾಮಸಮುದ್ರ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪಕಾಭಿವೃದ್ಧಿ ಯೋಜನೆಗೆ ಸರ್ಕಾರದ ಆದೇಶ ಸಂಖ್ಯೆ: ನಅಇ 434 ಮೈಅಪ್ರಾ 2001 ದಿನಾಂಕ: 20.12.2001 ರಲ್ಲಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(3) ರನ್ವಯ ಅಂತಿಮ ಅನುಮೋದನೆ ನೀಡಿರುತ್ತದೆ. ಸದರಿ ಕಾಯ್ದೆಯ ಪ್ರಕರಣ 13(4) ರನ್ವಯ ಸರ್ಕಾರದಿಂದ ಅಂತಿಮ ಅನುಮೋದನೆಗೊಂಡಿರುವ ಸ್ಥೂಲಾಭಿವೃದ್ಧಿ ಯೋಜನೆಯ ಕುರಿತು ದಿನಾಂಕ: 21.02.2002ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಣೆಯನ್ನು ಹೊರಡಿಸಲಾಗಿದೆ. ಆಯುಕ್ತರು ಚಾಮರಾಜನಗರ ನಗರಾಭಿವೃದ್ಧಿ ಪ್ರಾಧಿಕಾರ, ಇವರು ದಿನಾಂಕ: 05.03.2005 ರಂದು ಚಾಮರಾಜನಗರ ಜಿಲ್ಲೆ ಚಾಮರಾಜನಗರ-ರಾಮಸಮುದ್ರ ಪಟ್ಟಣದ ಸ್ಥಳೀಯ ಯೋಜನಾ ಪ್ರಾಧಿಕಾರಕ್ಕೆ ತಾತ್ಕಾಲಿಕ ವ್ಯಾಪಕಾಭಿವೃದ್ಧಿ ಯೋಜನೆಯ ನಕ್ಷೆ ಮತ್ತು ವರದಿಯನ್ನು ತಯಾರಿಸಿರುತ್ತಾರೆ.

ಚಾಮರಾಜನಗರದ ಜನಸಂಖ್ಯೆಯು 2001 ರಲ್ಲಿ 60,558 ಇದ್ದು 2021ನೇ ಇಸವಿಗೆ 1,25,000 ಆಗಬಹುದೆಂದು ಅಂದಾಜಿಸಿ ವ್ಯಾಪಕಾಭಿವೃದ್ಧಿ ಯೋಜನೆಯನ್ನು ಸಿದ್ದಪಡಿಸಲಾಗಿದೆ. ವಿಸ್ತರಿತ ಸ್ಥಳೀಯ ಯೋಜನಾ ಪ್ರದೇಶದ 12,099 ಹೆಕ್ಟೇರ್ ವಿಸ್ತೀರ್ಣದಲ್ಲಿ 1517.40 ಹೆಕ್ಟೇರ್ ಪ್ರದೇಶವನ್ನು ನಗರೀಕರಣ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ನಗರದ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ ಒಟ್ಟು 1517.40 ಹೆಕ್ಟೇರ್ ವಿಸ್ತೀರ್ಣದ ಪ್ರದೇಶದಲ್ಲಿ ವಸತಿಗೆ ಶೇ.57.36, ವಾಣಿಜ್ಯಕ್ಕೆ ಶೇ. 4.37, ಕೈಗಾರಿಕೆಗೆ ಶೇ.4.76 ಮತ್ತು ಸಾರ್ವಜನಿಕ : ಅರೆ ಸಾರ್ವಜನಿಕಕ್ಕೆ ಶೇ.6.40, ಉದ್ಯಾನವನ ಮತ್ತು ಬಯಲು ಜಾಗಕ್ಕೆ ಶೇ.6.55, ಸಾರಿಗೆ ಮತ್ತು ಸಂಪರ್ಕಕ್ಕಾಗಿ ಶೇ.19.90 ಮತ್ತು ನಾಗರೀಕ ಸೌಲಭ್ಯಕ್ಕಾಗಿ ಶೇ.0.14 ವಿಸ್ತೀರ್ಣವನ್ನು ನಿಗದಿಪಡಿಸಲಾಗಿದೆ.

ಚಾಮರಾಜನಗರ-ರಾಮಸಮುದ್ರ ಸ್ಥಳೀಯ ಯೋಜನಾ ಪ್ರದೇಶಕ್ಕೆ ಸಿದ್ದಪಡಿಸಿದ ಸ್ಥೂಲಾಭಿವೃದ್ಧಿ ಯೋಜನೆಗೆ ಸರ್ಕಾರವು ಅಂತಿಮ ಅನುಮೋದನೆ ನೀಡಿರುವುದರಿಂದ ಪ್ರಸ್ತಾಪಿತ ಯೋಜನೆಯನ್ನು Master Plan-Final ಎಂದು ಪರಿಗಣಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಚಾಮರಾಜನಗರ-ರಾಮಸಮುದ್ರ ನಗರಾಭಿವೃದ್ಧಿ ಪ್ರಾಧಿಕಾರವು ಸಲ್ಲಿಸಿರುವ ವ್ಯಾಪಕಾಭಿವೃದ್ಧಿ ಯೋಜನೆಯನ್ನು Master Plan Revision-I ಎಂದು ಪರಿಗಣಿಸಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ (ತಿದ್ದುಪಡಿ) ಕಾಯ್ದೆ 2004ರ ಕಲಂ 13-D ರನ್ವಯ ತಾತ್ಕಾಲಿಕ ಅನುಮೋದನೆ ನೀಡುವ ಬಗ್ಗೆ ಪರಿಶೀಲಿಸಲಾಗುತ್ತಿದೆ. ಆದುದರಿಂದ ಈ ಬಗ್ಗೆ ಸಾರ್ವಜನಿಕರ ಹಾಗೂ ಸಂಸ್ಥೆಗಳಿಂದ ಸಲಹೆ/ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದ್ದು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಲಿಖಿತ ಮೂಲಕ ಸಲಹೆ/ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿರ್ದೇಶಕರು, ನಗರ ಯೋಜನಾ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು-560 001 ಇವರಿಗೆ ಸಲ್ಲಿಸುವಂತೆ ಸೂಚಿಸಲಾಗಿದೆ. ಸದರಿ ಅವಧಿಯ ನಂತರ ಬರುವ ಸಲಹೆ/ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1083 **ಶಾಂತಾರಾಂ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ನಗರಾಭಿವೃದ್ಧಿ ಇಲಾಖೆ.

**DEPARTMENT OF PERSONNEL AND ADMINISTRATIVE REFORMS**

**NOTIFICATION**

**No. DPAR 10 SMR 2005, Bangalore, Dated: 30th July 2005**

In exercise of the powers conferred by clause (ff) of rule 3 of the Karnataka Government Servants (Medical Attendance) Rules 1963, the Government of Karnataka hereby adds-

**I.** the following items after item 118 of schedule I to the said rules, namely:-

(119) Athena Hospital, Mangalore.
(120) Aruna Hospital, Dr. Radhakrishna Road, Tumkur.
(121) Vinayaka Hospital, Ashoknagar, Tumkur.
(122) Bapuji Nursing Home, Someshwarapuram, Tumkur.
(123) Kadli Ningamma Memorial Hospital M.C.C.B. Block, Davanagere.
(124) Gayathri Hospital Vijayanagar, Bangalore-40
(125) Akkur Speciality Hospital Koramangala, Bangalore.
(126) Vinayaka Hospital, Hanumanthanagar, Bangalore.
(127) Karthik Nethralaya, N.R. Colony, Ashoknagar, Bangalore-50.
(128) Manohar Saigowda Memorial Hospital and Laproscopic Training Centre, Mulbagal, Kolar District.
(129) Manasa Hospital, Gowribidanur, Kolar District.
(130) Prashanth Medical Services, Nehrunagar, Mandya.
(131) Suraksha Nursing Home, Mandya.
(132) Annapoorna Hospital, K.M. Road, Chickmagalur.
(133) Jayapriya Hospital, Bylappanavaranagar, Hubli.
(134) Patil Nursing Home, Gulbarga.
(135) Hemavathi Hospital, Hassan.

**II.** the following items after item 14 under sub heading "Diagnostic Centres" of the schedule I to the said rules namely:-

(15) Das Diagnostic Laboratory and Scanning Centre, Hassan.

By Order and in the name of Governor of Karnataka,

P.R. 1084

**K. RAGHURAM BHANDARY**

Under Secretary to Government-2,

Department of Personnel and Administrative Reforms (Service Rules).

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಮತ್ತು ಕಾರ್ಮಿಕ ಅಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಕರಣ ಸಂಖ್ಯೆ: ಕಾಪಕ:ಸಿಆರ್-36:2005, ದಿನಾಂಕ: 21ನೇ ಜುಲೈ 2005**

**ಅರ್ಜಿದಾರರು :**

1) ಮಂಜುಳ ಕೋಂ ದಿ: ಸತೀಶ್ ಪೂಜಾರಿ,
2) ಸಚಿನ್ ಬಿನ್ ದಿ: ಸತೀಶ್ ಪೂಜಾರಿ,
3) ಸಿಂಚನ್ ಬಿನ್ ದಿ: ಸತೀಶ್ ಪೂಜಾರಿ

**ಇವರುಗಳ ವಿಳಾಸ**

ಕೆರ್ ಆಫ್ ಸುಂದರ್ ಸಿಂಚನ ಎಂಬ್ರಾಯಡರ್ ಮಹಾಗಣಪತಿ ದೇವಸ್ಥಾನದ ರಸ್ತೆ, ಟಿಪ್ಪುನಗರ, ಗೋಪಾಳ, ಶಿವಮೊಗ್ಗ.

4) ರಾಮಪೂಜಾರಿ ಬಿನ್ ಲೇಟ್ ಬಡಿಯಾ ಪೂಜಾರಿ
5) ಪದ್ಮಾವತಿ ಕೋಂ ರಾಮಪೂಜಾರಿ,

**ಇವರುಗಳ ವಿಳಾಸ:**

ಮಲ್ಲೀಸರ, ಸಿರಿಗಾರ ಅಂಚೆ, ತೀರ್ಥಹಳ್ಳಿ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು:**

1) ಹೆಚ್. ಶ್ರೀನಿವಾಸರಾವ್ ಬಿನ್ ವೆಂಕಟಸುಬ್ಬರಾವ್, ಮಾಲೀಕರು, ಬಾಲಾಜಿ ಟಿಫನ್ ರೂಂ, ತಿಲಕನಗರ ಮುಖ್ಯರಸ್ತೆ, ಶಿವಮೊಗ್ಗ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ದಿ: ಸತೀಶ್ ಪೂಜಾರಿ ರವರು ಪ್ರತಿವಾದಿಯವರಲ್ಲಿ ಅಡಿಗೆಯವರಾಗಿ ಕೆಲಸದ ಮೇಲೆ ಇದ್ದಾಗ 05.05.2005 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 11.07.2005 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ, ಅಥವಾ ಅರ್ಜಿಗಳನ್ನಾಗಲೀ ಈ

ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

**ಹೆಚ್.ಕೆ. ಷಣ್ಮುಖಪ್ಪ**

ಪಿ.ಆರ್.1085 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ

### ಪ್ರಕಟಣೆ

**ಸಂಖ್ಯೆ: ಬಿ3:ಸಿಓಎನ್:ಸಿಆರ್-24/04-05, ದಿನಾಂಕ: 30ನೇ ಜುಲೈ 2005**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಅರಣ್ಯ ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರು ಪಡಿಸಲಾದ ವಾಹನದ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಚಾಸೀಸ್ ಸಂಖ್ಯೆ |
|---|---|---|---|---|
| 1 | ಹಿರೋಪುಕ್ ಮೋಪೆಡ್ ನಂ. ಕೆಎ 14 ಜಿ 2405 | ಭದ್ರಾವತಿ ವಲಯ ಅರಣ್ಯ ಮೊಕದ್ದಮೆ ಸಂಖ್ಯೆ 225/04-05, ದಿನಾಂಕ: 22.03.2005. | ಇಬಿ 437414 | ಟಿಸಿ 444259 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಪ್ರಕಟಣೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರು ಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧವನ್ನು ಮತ್ತು ಇತರೆ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಸಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳ ಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,

ಪಿ.ಆರ್.1202 ಭದ್ರಾವತಿ ವಿಭಾಗ, ಭದ್ರಾವತಿ.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪ ವಿಭಾಗ-2, ಬೆಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು-2 ಇವರ ನ್ಯಾಯಾಲಯ

**ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್-16/2005 (ಎಫ್), ದಿನಾಂಕ: 26ನೇ ಜುಲೈ 2005**

**ಅರ್ಜಿದಾರರು :**

1) ಶ್ರೀಮತಿ ಮೋಹಿನಿ ಕೋಂ ಲೇಟ್ ಪ್ರಕಾಶ್,
2) ಕು: ಸುಮಿತಾ
3) ಮಾ: ಪುರುಶೋತ್ತಮ
4) ಮಾ: ಶ್ರವಣ್,
   ಲೇಟ್ ಪ್ರಕಾಶರವರ ಮಕ್ಕಳು
6) ಈಶ್ವರ ಸಫಲ್ಯ ಬಿನ್ ಧೂಮ ಸಫಲ್ಯ
7) ಶ್ರೀಮತಿ ಪದ್ಮಾವತಿ ಕೋಂ ಈಶ್ವರ ಸಫಲ್ಯ
   ವಾಸ: ರಾಮನಗರ, ಉಪ್ಪಿನಂಗಡಿ ಗ್ರಾಮ ಮತ್ತು ಅಂಚೆ,
   ಪುತ್ತೂರು ತಾಲ್ಲೂಕು, ದ.ಕ.

**ವಿರುದ್ಧ**

**ಪ್ರತಿವಾದಿಗಳು:**

1) ಶ್ರೀಮತಿ ಶಾಂತಿ ಕೋಂ ಲೇಟ್ ಜಯಕುಮಾರ್
   ಮರಿಕೆ ಮನೆ, ರಾಮನಗರ, ಉಪ್ಪಿನಂಗಡಿ ಗ್ರಾಮ
   ಮತ್ತು ಅಂಚೆ, ಪುತ್ತೂರು ತಾಲ್ಲೂಕು, ದ.ಕ.
2) ವ್ಯವಸ್ಥಾಪಕರು,
   ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ.ಲಿ.,
   ಶಾಖಾ ಕಛೇರಿ, 1ನೇ ಮಹಡಿ, ಪ್ರಭು ಬಿಲ್ಡಿಂಗ್,
   ಮುಖ್ಯರಸ್ತೆ, ಪುತ್ತೂರು.

### ಅಧಿಸೂಚನೆ

ಅರ್ಜಿದಾರರಾದ ಶ್ರೀಮತಿ ಮೋಹಿನಿ ಇವರು ತಮ್ಮ ಗಂಡನಾದ ಶ್ರೀ ಪ್ರಕಾಶ್ ಬಿನ್ ಈಶ್ವರ ಸಾಫಲ್ಯ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 12.2.2005 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**

ಪಿ.ಆರ್.1090 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,

ದ.ಕ. ಉಪ ವಿಭಾಗ-2, ಮಂಗಳೂರು.